viii) ensure publication of its meeting agenda papers and minutes, as well as those of the Governing Body, on Internet Website in the official language(s) of the State.

By Order and in the name of the Governor of Karnataka,

**P.R. KALAVATHI**

Under Secretary to Government,

Forest, Ecology and Environment Department

P.R. 1655

**Sub:** JBIC Phase II - Karnataka Sustainable Forest Management & Bio-diversity Conservation Project- Sanction of the Annual Plan of Operation for the year 2009-10.

**Read:**
1) G.O. No: FEE 279 FAP 2003, dated: 23-05-2005.
2) G.O. No: FEE 162 FAP 2005, dated: 12-09-2005
3) G.O. No: FEE 97 FAP 2006, dated: 19-07-2006.
4) G.O. No. FEE 79 FAP 2007, dated: 14-06-2007.
5) G.O.No.FEE 85 FAP 2008, dated 02-07-2008
6) Letter No:D1/BUD/CR-90/2009-10 dated: 09-06-2008 from the Principal Chief Conservator of Forests Bangalore.

**Preamble:-**

In G.O. referred at (1) above, Karnataka Sustainable Forest Management & Bio-diversity Conservation Project has been approved for implementation from 2005-06 to 2012-2013 with a total outlay of Rs. 745.00 crores in the State over a period of 8 years with certain conditions.

In G.O. referred at (2) above, sanction has been accorded for Annual Plan Operations for the year 2005-06 with an outlay Rs. 77.20 crores under the JBIC Phase II - Assisted Karnataka Sustainable Forest Management & Bio-diversity Conservation Project.

In G.O. referred at (3) above, sanction has been accorded for Annual Plan Operations for the year 2006-07 with an outlay Rs. 108.70 crores under the JBIC Phase II - Assisted Karnataka Sustainable Forest Management & Bio-diversity Conservation Project.

In G.O. referred at (4) above, sanction has been accorded for Annual Plan Operations for the year 2007-08 with an outlay Rs. 137.62 crores under the JBIC Phase II - Assisted Karnataka Sustainable Forest Management & Bio-diversity Conservation Project.

In G.O. referred at (5) above, sanction has been accorded for Annual Plan Operations for the year 2008-09 for an outlay Rs. 139.69 crores under the JBIC Phase II - Assisted Karnataka Sustainable Forest Management & Bio-diversity Conservation Project and also sanction was accorded to meet the expenditure on the Honorarium of Forest Motivators to an extent of Rs.2.70 crores and on backlog works of 2005-06, 2006-07 and 2007-08 to an extent of Rs.13.30 crores, on Afforestation, Protected Area Management & Biodiversity Conservation, Participatory Forest Management, Supporting Activities for Forest Management and Basic Infrastructure for Field Work and for the procurement of additional 60 computers and 16 vehicles out of the overall outlay of Rs.139.69 crores, during 2008-09.

In the letter referred at (6) above, the Principal Chief Conservator of Forests has informed that the Special Empowered Committee in its 6th meeting held on 28-05-2009 approved the Annual Plan Operation under the Project for the year 2009-10 with an outlay of Rs. 137.00 crores and has sought issue of Government Order in this regard.

The proposal has been examined in detail. The Government has decided to approve the Annual Plan of Operations for the year 2009-10 for an outlay of Rs. 137.00 crores. Hence the order.

**Government Order No. FEE 92 FAP 2009, Bangalore, Dated: 29th June 2009**

In the circumstances explained above, sanction is accorded to the JBIC Phase II- Karnataka Sustainable Forest Management & Bio-diversity Conservation Project Annual Plan of Operations for the

year 2009-10 for an outlay of Rs. 137.00 crores (Rupees one hundred thirty seven crores only) as detailed in the Annexure to this Government Order

This order issued in accordance with the decisions taken in the 6th meeting of the Empowered Committee held on 28-05-2009.

By order and in the name of Governor of Karnataka

**P.R. KALAVATHI**

Under Secretary to Government,

Forest, Environment & Ecology Department.

**Government Order No: FEE 92 FAP 2009, Bangalore, dated: 29-06-2009.**

**ANNEXURE**

**ANNUAL PROGRAMME OF WORKS FOR THE YEAR 2009-10 UNDER JICA ASSISTED KSFMBC PROJECT**

| Sl. No | Components/Activities | Unit | Target | |
|---|---|---|---|---|
| | | | Physical | Financial (Rs.in lakhs) |
| **1** | **AFFORESTATION** | | | |
| **1.1** | **Model-1-Ecological Restoration through natural regeneration** | | | |
| 1.11 | 3rd maintenance | Ha. | 6,040 | 60.400 |
| 1.12 | 2nd year maintenance | Ha. | 4,960 | 49.600 |
| 1.13 | 1st year maintenace | Ha. | 6,050 | 114.345 |
| 1.14 | Monsoon work | Ha. | 8,083 | 649.065 |
| **1.2** | **Model-2 Assisted Natural Regeneration** | | | |
| 1.21 | 2nd year maintenace | Ha. | 4,620 | 90.090 |
| 1.22 | 1st year maintenace | Ha. | 14,665 | 344.628 |
| 1.23 | Raising Plantation | Ha. | 16,569 | 932.835 |
| 1.24 | Advance Work | Ha. | 11,360 | 1,591.536 |
| **1.3** | **Model-3-Plantations for Timber Production** | | | |
| 1.31 | 3rd year maintenace | Ha. | 25 | 0.658 |
| 1.32 | 2nd year maintenace | Ha. | 7,883 | 207.323 |
| 1.33 | 1st year maintenace | Ha. | 6,175 | 266.143 |
| 1.34 | Raising of Plantation | Ha. | 5,955 | 547.860 |
| 1.35 | Advance Work | Ha. | 4,495 | 851.803 |
| **1.4** | **Model-4-Plantations for Fuel Wood & Small Timber Production** | | | |
| 1.41 | 3rd year maintenace | Ha. | 13,615 | 347.183 |
| 1.42 | 2nd year mainteance | Ha. | 8,000 | 204.000 |
| 1.43 | 1st year mainteance | Ha. | 7,005 | 340.443 |
| 1.44 | Raising of Plantation | Ha. | 8,653 | 1,092.009 |
| 1.45 | Advance Work | Ha. | 11,227 | 2,208.912 |
| **1.5** | **Model-5-NTFP Plantations** | | | |
| 1.51 | 2nd year maintenace | Ha. | 5,950 | 152.915 |
| 1.52 | 1st year maintenace | Ha. | 6,025 | 356.078 |
| 1.53 | Raising of Plantation | Ha. | 6,075 | 498.454 |

| Sl. No | Components/Activities | Unit | Target | |
|---|---|---|---|---|
| | | | Physical | Financial (Rs.in lakhs) |
| **1.6** | **Model-6-School Forest** | | | |
| 1.61 | 1st year maintenace | Ha. | 719 | 8.269 |
| 1.62 | Raising of Plantation | Ha. | 500 | 27.050 |
| 1.63 | Advance Work | Ha. | 500 | 43.950 |
| **1.7** | **Model-7-Restoration of Mangroves** | | | |
| 1.71 | 1st year maintenace | Ha. | 430 | 25.972 |
| 1.72 | Monsoon Work | Ha. | 185 | 55.130 |
| 1.8 | Model-8-Farm Forestry | | | |
| 1.81 | Workshops/discussion/seminar on Farm Forestry, Tree based agriculture tree | Nos. | 10 | 4.500 |
| 1.82 | Rewards and incentives for successful farmers | Nos. | 200 | 2.100 |
| **1.9** | **Soil Conservation & Water Conservation Measures** | | | |
| 1.91 | Model-1-Ecological Restoration through natural regeneration | Ha. | 8,083 | 143.877 |
| 1.92 | Model-2-Assisted Natural Regeneration | Ha. | 11,360 | 415.776 |
| 1.93 | Model-3-Plantations for Timber production | Ha. | 4,495 | 235.988 |
| 1.94 | Model-4-Plantations for Fuel Wood & Small Timber Production | Ha. | 11,227 | 632.080 |
| | **Sub-Total** | | | **12,500.968** |
| **2** | **PROTECTED AREA MAN-AGEMENT & BIO-DIVERSITY CONSERVATION** | | | |
| 2.1 | New Fire line Formation | Km. | 442 | 4.906 |
| 2.2 | Habitat Improvement | Ha. | 750 | 12.450 |
| 2.3 | Eco-development works | | | |
| 2.32 | New Elephant Proof Trench (EPT) | Km. | 50 | 82.885 |
| 2.33 | EPT Maintenace | Km. | 50 | 13.261 |
| | **Sub-Total** | | | **113.502** |
| **3** | **PARTICIPATORY FOREST MANAGEMENT** | | | |
| 3.1 | 3rd Installment of IGA for 2007-08 VFCs | Nos. | 353 | 105.90 |
| 3.2 | JFPM Co-ordinator | No. | 1 | 6.00 |
| 3.3 | Lead NGOs | Nos. | 5 | 12.00 |
| 3.4 | JFPM Facilitators | Nos. | 60 | 86.40 |
| | **Sub-Total** | | | **210.300** |
| **4** | **BASIC INFRSTRUCTURE FOR FIELD WORKS** | | | |
| 4.1 | Buildings | | | |
| 4.11 | Residential Buildings | Nos. | 14 | 114.040 |
| 4.12 | Non-Residential Buildings | Nos. | 4 | 32.560 |
| | **Sub Total** | | | **146.600** |

| Sl. No | Components/Activities | Unit | Target | |
|---|---|---|---|---|
| | | | Physical | Financial (Rs.in lakhs) |
| **5** | **REPAIR,MAINTENANCE AND OFFICE EXPENSES (RMOE)** | | | |
| 5.1 | Office Expenditure | Nos. | - | 74.500 |
| 5.2 | Telephone Charges | Nos. | - | 15.000 |
| 5.3 | Fuel Expenditure & Repairs of vehicle | Nos. | - | 130.800 |
| 5.4 | Travel Allowance | Nos. | - | 63.700 |
| 5.5 | Building Maintenace | Nos. | - | 140.000 |
| | **Sub-Total** | | **-** | **424.000** |
| 6 | Salary of reployed staff | Nos. | 1,062 | 318.60 |
| 7 | Pending payment | | - | 32.708 |
| | **Total** | | | **13,746.677** |
| | **Limited to** | | | **13,700.000** |

By order and in the name of Governor of Karnataka,

**P.R. KALAVATHI**

P.R. 1686

Under Secretary to Government,

Forest, Environment & Ecology Department.

## ಸಹಕಾರ ಸಚಿವಾಲಯ

**ವಿಷಯ:** ಶ್ರೀ ಉಚ್ಚಂಗೆಮ್ಮ ವಿದ್ಯಾ ಸಂಸ್ಥೆ (ಎಸ್.ಸಿ), ಉಚ್ಚಂಗಿ ದುರ್ಗ, ಹರಪನಹಳ್ಳಿ ತಾಲ್ಲೂಕು ಇದಕ್ಕೆ ಆಡಳಿತಾಧಿಕಾರಿಯನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:** ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ರವರ ಪತ್ರ ಸಂಖ್ಯೆ: ಆಡಳಿತ/ಎಸ್‌ಓಆರ್/322/ 2008–09 ದಿನಾಂಕ: 18/03/2009.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 18/03/2009 ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ಇವರು ಶ್ರೀ ಉಚ್ಚಂಗೆಮ್ಮ ವಿದ್ಯಾ ಸಂಸ್ಥೆ (ಎಸ್.ಸಿ), ಉಚ್ಚಂಗಿ ದುರ್ಗ, ಹರಪನಹಳ್ಳಿ ತಾಲ್ಲೂಕು ಈ ಸಂಸ್ಥೆಯು ದಿನಾಂಕ: 07/07/1999 ರಂದು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ರೀತ್ಯ ನೋಂದಣಿಯಾಗಿ ಕೆಲಸ ನಿರ್ವಹಿಸಿಕೊಂಡು ಬರುತ್ತಿದೆ. ದಿನಾಂಕ: 31/12/2006 ರ ವರೆಗೆ ಲೆಕ್ಕಪತ್ರಗಳನ್ನು ಸಂಬಂಧಿಸಿದ ಜಿಲ್ಲಾ ನೋಂದಣಾಧಿಕಾರಿಗಳಿಗೆ ಒಪ್ಪಿಸಿ ನವೀಕರಣಗೊಂಡಿರುತ್ತದೆ. ಸದರಿ ಸಂಸ್ಥೆಯ ಕಾರ್ಯಕಾರಿ ಮಂಡಳಿ ಸದಸ್ಯರಲ್ಲಿ ಒಡಕು ಉಂಟಾಗಿ ಶ್ರೀ ಪರಸುಬ್ಬ, ಕಾರ್ಯದರ್ಶಿ ಎಂದು ಮತ್ತೊಂದು ಶ್ರೀ ಎ.ಕೆ.ಬಸಪ್ಪ, ಕಾರ್ಯದರ್ಶಿ ಎಂದು ದೋಷಾರೋಪಣೆ ಮಾಡುತ್ತಾ, ಇಲಾಖೆಗೆ ದೂರು ಅರ್ಜಿಗಳನ್ನು ಸಲ್ಲಿಸಿ ಸಂಘದ ನವೀಕರಣಕ್ಕಾಗಿ ಪ್ರತ್ಯೇಕ ಕಾರ್ಯಕಾರಿ ಮಂಡಳಿ ಮತ್ತು ಆಡಿಟ್ ವರದಿಗಳನ್ನು ಸಲ್ಲಿಸಿ ನವೀಕರಣ ಮಾಡಲು ಕೋರಿರುವುದಾಗಿ ತಿಳಿಸಿರುತ್ತಾರೆ.

ಸದರಿ ಗುಂಪುಗಳ ವೈಮನಸ್ಸಿನಿಂದ ಸಂಸ್ಥೆಯಿಂದ ನಡೆಸಲ್ಪಡುವ ಶ್ರೀ ರೇಣುಕಾಂಭ ಸ್ವತಂತ್ರ ಪದವಿ ಪೂರ್ವ ಕಾಲೇಜಿನ ನೌಕರರಿಗೆ ಅನುದಾನ ದೊರೆಯದೇ ಹಾಗೂ ಕಾಲೇಜು ವಿದ್ಯಾರ್ಥಿಗಳಿಗೆ ಸರಿಯಾದ ಪಾಠ ಪ್ರವಚನಗಳ ಸೌಲಭ್ಯಕ್ಕೆ ತೊಂದರೆಯಾಗುತ್ತಿದೆ. ಈ ಎರಡು ಗುಂಪುಗಳು ಆಡಳಿತ ಮಂಡಳಿ ನವೀಕರಣಕ್ಕಾಗಿ ಪ್ರಸ್ತಾವನೆ ಸಲ್ಲಿಸಿ, ಗೊಂದಲಮಯ ವಾತಾವರಣ ಸೃಷ್ಟಿಯಾಗಿರುವುದರಿಂದ ಹಾಗೂ ಈ ಸಂಸ್ಥೆ ನಡೆಸುತ್ತಿರುವ ಶ್ರೀ ರೇಣುಕಾಂಭ ಸ್ವತಂತ್ರ ಪದವಿ ಪೂರ್ವ ಕಾಲೇಜಿನ ನೌಕರರ ಹಾಗೂ ವಿದ್ಯಾರ್ಥಿಗಳ ಹಿತದೃಷ್ಠಿಯಿಂದ ಈ ಸಂಘಕ್ಕೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27–ಎ(1)(ಸಿ) ಪ್ರಕಾರ ಆರು ತಿಂಗಳ ಅವಧಿಗೆ ಆಡಳಿತಾಧಿಕಾರಿಯನ್ನು ನೇಮಕ ಮಾಡಲು ಹಾಗೂ ಈ ಅವಧಿಯಲ್ಲಿ ಆಡಳಿತಾಧಿಕಾರಿಯವರು ಅರ್ಹ ಸದಸ್ಯರಿಂದ ಚುನಾವಣೆ ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರ ವಹಿಸಿಕೊಡುವ ಷರತ್ತು ವಿಧಿಸಿ ಆಡಳಿತಾಧಿಕಾರಿಯನ್ನು ನೇಮಕ ಮಾಡುವಂತೆ ಕೋರಿರುತ್ತಾರೆ.

ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿದ ಸರ್ಕಾರ ಸಂಘದ ಹಿತದೃಷ್ಠಿಯಿಂದ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಇ 60 ಸಸಂನೋ 2009 ಬೆಂಗಳೂರು, ದಿನಾಂಕ: 10ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಉಚ್ಚಂಗೆಮ್ಮ ವಿದ್ಯಾ ಸಂಸ್ಥೆ (ಎನ್.ಸಿ), ಉಚ್ಚಂಗಿ ದುರ್ಗ, ಹರಪನಹಳ್ಳಿ ತಾಲ್ಲೂಕು ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27–ಎ(1)(ಸಿ) ರನ್ವಯ ಸರ್ಕಾರಕ್ಕೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ರವರನ್ನು ಆಡಳಿತಾಧಿಕಾರಿಯನ್ನಾಗಿ 6 (ಆರು) ತಿಂಗಳ ಅವಧಿಗೆ ನೇಮಿಸಲಾಗಿದೆ.

ಆಡಳಿತಾಧಿಕಾರಿಗಳು ಸದರಿ ಅವಧಿಯಲ್ಲಿ ಸಂಘದ ಚುನಾವಣೆ ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಸಹ ಸೂಚಿಸಿದೆ. ಆಡಳಿತಾಧಿಕಾರಿಗಳು ತೆಗೆದುಕೊಂಡ ಕ್ರಮಗಳ ಬಗ್ಗೆ ಸರ್ಕಾರಕ್ಕೆ ಮಾಹಿತಿಯನ್ನು ಒದಗಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1577

**ನಂಜುಂಡಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ

**ವಿಷಯ:** ಕರ್ನಾಟಕ ರಾಜ್ಯ ವಿಶ್ವ ಕರ್ಮ ಸಮಾಜ, ಬೆಂಗಳೂರು ಸಂಘಕ್ಕೆ ಆಡಳಿತಾಧಿಕಾರಿಯನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**
1. ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ರವರ ಪತ್ರ ಸಂಖ್ಯೆ: ಡಿಆರ್/ಎಸ್ಓಆರ್/ಪಿಟಿಷನ್/56/2008–09 ದಿನಾಂಕ: 26/09/2008
2. ದಿನಾಂಕ: 03/11/2008 ರ ಸಂಖ್ಯೆ: ಸಇ 90 ಸಸಂನೋ 2008 ರ ಕಾರಣ ಕೇಳುವ ನೋಟೀಸ್.
3. ಕರ್ನಾಟಕ ರಾಜ್ಯ ವಿಶ್ವಕರ್ಮ ಸಮಾಜ (ರಿ), ಬೆಂಗಳೂರು ಸಂಸ್ಥೆಯ ಪ್ರಧಾನ ಕಾರ್ಯದರ್ಶಿಗಳ ದಿನಾಂಕ:16/05/2009 ರ ಹೇಳಿಕೆ.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ದಿನಾಂಕ: 26/09/2008 ರ ಸಹಕಾರ ಸಂಘಗಳ ನಿಬಂಧಕರ ಪತ್ರದಲ್ಲಿ ಕರ್ನಾಟಕ ರಾಜ್ಯ ವಿಶ್ವಕರ್ಮ ಸಮಾಜ, ಬೆಂಗಳೂರು ಈ ಸಂಘವು ದಿನಾಂಕ: 14/03/1942 ರಂದು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆಯಡಿ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯಕಾರಿ ಸಭೆಯಲ್ಲಿ 18 ಸದಸ್ಯರಿದ್ದು, ಕಾರ್ಯಕಾರಿ ಸಮಿತಿಯ ಅವಧಿ 3 ವರ್ಷಗಳಾಗಿರುತ್ತದೆ. ಸದರಿ ಸಂಘದ ಸರ್ವ ಸದಸ್ಯರ ಸಭೆಯನ್ನು ಮತ್ತು ಚುನಾವಣೆಯನ್ನು ದಿನಾಂಕ:07/04/1996 ರಂದು ಜರುಗಿಸಲಾಗಿದೆ.

ಇತ್ತೀಚಿನ ಕಾನೂನುಗಳನ್ವಯ ಸದಸ್ಯರಿಗೆ ಭಾವಚಿತ್ರವಿರುವ ಗುರುತಿನ ಚೀಟಿಯನ್ನು ವಿಸ್ತರಿಸಲು ಕ್ರಮವಿಡಲಾಗುತ್ತಿರುವುದರಿಂದ ವಾರ್ಷಿಕ ಮಹಾ ಸಭೆ ನಡೆಸಿ ಚುನಾವಣೆ ನಡೆಸಲು ವಿಳಂಬವಾಗಿರುವುದರಿಂದ ಸರ್ವ ಸದಸ್ಯರ ಸಭೆಯನ್ನು ನಡೆಸಲು ಮಾರ್ಚ್–2009 ರ ವರೆಗೆ ಕಾಲಾವಕಾಶ ನೀಡಬೇಕೆಂದು ಸಂಘದ ಪ್ರಧಾನ ಕಾರ್ಯದರ್ಶಿ ರವರು ದಿನಾಂಕ: 12/09/2008 ಮತ್ತು 22/09/2008 ರ ಪತ್ರದಲ್ಲಿ ಕೋರಿರುತ್ತಾರೆ. ಇದನ್ನು ಪರಿಶೀಲಿಸಿದ ಸಹಕಾರ ಸಂಘಗಳ ನಿಬಂಧಕರು ಸಂಘಕ್ಕೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ಕಲಂ 11 ರನ್ವಯ ಪ್ರತಿ ವರ್ಷ ಸರ್ವ ಸದಸ್ಯರ ವಾರ್ಷಿಕ ಮಹಾ ಸಭೆಯನ್ನು ದಿನಾಂಕ: 07/04/1996 ರಂದು ನಡೆಸಿ, ನಂತರ ಇದುವರೆವಿಗೂ ವಾರ್ಷಿಕ ಮಹಾ ಸಭೆಯನ್ನು ನಡೆಸಿರುವುದಿಲ್ಲ. ಪ್ರಸ್ತುತ ಇರುವ ಕಾರ್ಯಕಾರಿ ಸಮಿತಿಯ ಅವಧಿಯು ಈಗಾಗಲೇ 1999 ನೇ ಸಾಲಿನಲ್ಲಿ ಮುಗಿದಿರುವುದರಿಂದ ಸಂಘದ ಬೈಲಾ ಉಲ್ಲಂಘನೆಯಾಗಿರುತ್ತದೆ. ಕಛೇರಿಯ ದಾಖಲಾತಿಗಳನ್ನು ಪರಿಶೀಲಿಸಲಾಗಿ 1985 ನೇ ಸಾಲಿನಿಂದ ಸಂಘದ ಲೆಕ್ಕಪತ್ರಗಳನ್ನು ಕಛೇರಿಗೆ ದಾಖಲಿಸದೇ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 13 ಉಲ್ಲಂಘನೆಯಾಗಿರುತ್ತದೆ. ಸಂಘದ ಜ್ಞಾಪನ ಪತ್ರ ಮತ್ತು ನಿಯಮಗಳ ತಿದ್ದುಪಡಿಯನ್ನು ಸಂಬಂಧಪಟ್ಟ ಪ್ರಾಧಿಕಾರದಿಂದ ಅನುಮೋದನೆ ಪಡೆಯದೇ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 9 ಮತ್ತು 10 ನ್ನು ಉಲ್ಲಂಘನೆ ಮಾಡಿರುವುದಾಗಿ ವರದಿ ಮಾಡುತ್ತಾ, ಸಂಘದ ಕಾರ್ಯಕಾರಿ ಸಮಿತಿಯನ್ನು ರದ್ದುಪಡಿಸಿ, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27(ಎ) ರನ್ವಯ ಆಡಳಿತಾಧಿಕಾರಿಯನ್ನು ನೇಮಕ ಮಾಡುವುದು ಸೂಕ್ತವೆಂದು ಅಭಿಪ್ರಾಯವನ್ನು ನೀಡಿ ಉಪ ನಿಬಂಧಕರು–1, ಬೆಂಗಳೂರು ನಗರ ಜಿಲ್ಲೆ ರವರನ್ನು ಆಡಳಿತಾಧಿಕಾರಿಯಾಗಿ ನೇಮಿಸಲು ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ದಿನಾಂಕ: 03/11/2008 ರ ಕಾರಣ ಕೇಳುವ ನೋಟೀಸನ್ನು ಸಂಘದ ಅಧ್ಯಕ್ಷರು ಮತ್ತು ಕಾರ್ಯದರ್ಶಿಗಳಿಗೆ ದಿನಾಂಕ: 05/11/2008 ರಂದು ಜಾರಿ ಮಾಡಲಾಗಿದೆ. ಸದರಿ ನೋಟೀಸಿನಲ್ಲಿ ಸಂಘವು ಬೈಲಾ ಉಲ್ಲಂಘನೆ ಮಾಡಿರುವ ಬಗ್ಗೆ ವಿವರವಾಗಿ ತಿಳಿಸುತ್ತಾ, ಬೈಲಾ ಉಲ್ಲಂಘನೆ ಮಾಡಿರುವುದು ಮೇಲ್ನೋಟಕ್ಕೆ ಕಂಡುಬರುತ್ತದೆಯಾದ್ದರಿಂದ, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27(ಎ) ರ ಪ್ರಕಾರ ತಮ್ಮ ಸಂಘಕ್ಕೆ ಆಡಳಿತಾಧಿಕಾರಿಯನ್ನು ಏಕೆ ನೇಮಕ ಮಾಡಬಾರದು ಎಂಬ ಬಗ್ಗೆ ನಿಮ್ಮ ಲಿಖಿತ/ಮೌಖಿಕ ಹೇಳಿಕೆಯನ್ನು ಸೂಚನ ಪತ್ರ ತಲುಪಿದ 15 ದಿವಸಗಳೊಳಗಾಗಿ ಸಲ್ಲಿಸುವಂತೆ, ತಪ್ಪಿದಲ್ಲಿ ನೀವು ಹೇಳುವುದು ಏನೂ ಇಲ್ಲವೆಂದು ಭಾವಿಸಿ ನಿಯಮಾನುಸಾರ ಮುಂದಿನ ಕ್ರಮ ಜರುಗಿಸುವುದಾಗಿ ತಿಳಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ದಿನಾಂಕ: 16/05/2009 ರ ಪತ್ರದಲ್ಲಿ ಸಂಘದ ಪ್ರಧಾನ ಕಾರ್ಯದರ್ಶಿಗಳು ದಿನಾಂಕ: 03/11/2008 ರ ಕಾರಣ ಕೇಳುವ ನೋಟೀಸಿಗೆ ಉತ್ತರಿಸುತ್ತಾ, ನಮ್ಮ ಸಮಾಜವು ತುಂಬಾ ಹಿಂದುಳಿದ ಸಮಾಜವಾಗಿದ್ದು, ಹಲವಾರು ವರ್ಷಗಳಿಂದ ಸಮಾಜಕ್ಕೆ ಯಾವುದೇ ಆರ್ಥಿಕ ಸಹಾಯವಿಲ್ಲ. ಆಡಳಿತಾಧಿಕಾರಿಗಳನ್ನು ನೇಮಿಸಿದರೆ ಅವರಿಗೆ ವೇತನವನ್ನು ಸಹ ಕೊಡಲು ಸಂಘದಲ್ಲಿ ಹಣವಿಲ್ಲ. ಸಾರ್ವಜನಿಕ ದೇಣಿಗೆಯಿಂದ 80 ರಿಂದ 100 ಜನ ವಿದ್ಯಾರ್ಥಿಗಳಿಗೆ ವಸತಿ ಹಾಗೂ ಊಟದ ವ್ಯವಸ್ಥೆ ಮಾಡಲಾಗುತ್ತಿದೆ. ನೀರಿನ ಸೌಕರ್ಯವಿಲ್ಲದೆ ಹಲವಾರು ದಾನಿಗಳಿಂದ ಹಣ ಸಂಗ್ರಹಿಸಿ ಕೊಳವೆ ಬಾವಿಯನ್ನು ತೆಗೆಸಲಾಗಿದೆ. ವಿದ್ಯುತ್ ಬಿಲ್ಲನ್ನು ಕಟ್ಟಲೂ ಸಹ ಹಣವಿರುವುದಿಲ್ಲ. ದಿನಾಂಕ: 03/03/2009 ರಂದು ಮಾನ್ಯ ಜಿಲ್ಲಾ ನೋಂದಣಾಧಿಕಾರಿಗಳಲ್ಲಿ ಕರೆದಿದ್ದ ಸಭೆಯಲ್ಲಿ ಚುನಾವಣೆಯನ್ನು ನಡೆಸಲು ಪದಾಧಿಕಾರಿಗಳಿಗೆ ತಿಳಿಸಿದ್ದೇನೆ. ಇದೇ ಸಮಯದಲ್ಲಿ ಲೋಕಸಭೆ ಚುನಾವಣೆ ಇದ್ದ ಪ್ರಯುಕ್ತ ಚುನಾವಣೆ ನಡೆಸಲು ನೀತಿ ಸಂಹಿತೆ ಅಡ್ಡಿಯಾಗಿತ್ತು. ಆದ್ದರಿಂದ, ದಯಮಾಡಿ ಎರಡು ತಿಂಗಳ ಕಾಲಾವಕಾಶವನ್ನು ಕೊಟ್ಟರೆ, ಆ ಅವಧಿಯಲ್ಲಿ ಚುನಾವಣೆಯನ್ನು ನಡೆಸುವುದಾಗಿ ಕೋರಿರುತ್ತಾರೆ.

ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿದ ಸರ್ಕಾರ ಸಂಘದ ಹಿತದೃಷ್ಟಿಯಿಂದ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಇ 90 ಸಸಂನೋ 2008 ಬೆಂಗಳೂರು, ದಿನಾಂಕ: 9ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ವಿಶ್ವಕರ್ಮ ಸಮಾಜ (ರಿ), ಬೆಂಗಳೂರು ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27(ಎ)(ಸಿ) ರನ್ವಯ ಸರ್ಕಾರಕ್ಕೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಉಪ ನಿಬಂಧಕರು–1, ಬೆಂಗಳೂರು ನಗರ ಜಿಲ್ಲೆ ರವರನ್ನು ಆಡಳಿತಾಧಿಕಾರಿಯನ್ನಾಗಿ 3 (ಮೂರು) ತಿಂಗಳ ಅವಧಿಯಲ್ಲಿ ಹಾಲಿ ಇರುವ ಸದಸ್ಯರಿಂದ ಸಂಘಕ್ಕೆ ಚುನಾವಣೆಯನ್ನು ನಡೆಸಲು ಮಾತ್ರ ನೇಮಿಸಿದೆ.

ಆಡಳಿತಾಧಿಕಾರಿಗಳು ಸದರಿ ಅವಧಿಯಲ್ಲಿ ಸಂಘದ ಚುನಾವಣೆ ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರಿವನ್ನು ಹಸ್ತಾಂತರಿಸುವಂತೆ ಸಹ ಸೂಚಿಸಿದೆ. ಆಡಳಿತಾಧಿಕಾರಿಗಳು ತೆಗೆದುಕೊಂಡ ಕ್ರಮಗಳ ಬಗ್ಗೆ ಸರ್ಕಾರಕ್ಕೆ ಮಾಹಿತಿಯನ್ನು ಒದಗಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1678

**ನಂಜುಂಡಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ

**ವಿಷಯ:** ಶ್ರೀ ಉಚ್ಚೆಂಗೆಮ್ಮ ವಿದ್ಯಾ ಸಂಸ್ಥೆ (ಎಸ್.ಸಿ) ಉಚ್ಚಂಗಿ ದುರ್ಗ, ಹರಪನಹಳ್ಳಿ ತಾಲ್ಲೂಕು ಇದಕ್ಕೆ ಆಡಳಿತಾಧಿಕಾರಿಯನ್ನು ನೇಮಕ ಮಾಡುವ ಬಗ್ಗೆ

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ:ಸಇ 60 ಸಸಂನೋ 2009 ದಿನಾಂಕ:10–06–2009.

2. ಆಡಳಿತಾಧಿಕಾರಿಗಳು ಶ್ರೀ ಉಚ್ಚೆಂಗೆಮ್ಮ ವಿದ್ಯಾ ಸಂಸ್ಥೆ ಶ್ರೀ ಉಚ್ಚೆಂಗೆಮ್ಮ ವಿದ್ಯಾ ಸಂಸ್ಥೆ ಇದರ ಆಡಳಿತಾಧಿಕಾರಿಗಳ ಪತ್ರ ಸಂಖ್ಯೆ:ಡಿಆರ್/ಡಿವಿಜಿ/ಸಂನೋ/ಸಿಆರ್–12/90–91 ದಿನಾಂಕ:15.06.2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂ. (1) ರ ದಿನಾಂಕ: 10/06/2009 ರ ಆದೇಶದಲ್ಲಿ ಶ್ರೀ ಉಚ್ಚೆಂಗೆಮ್ಮ ವಿದ್ಯಾ ಸಂಸ್ಥೆಗೆ ಕರ್ನಾಟಕ ಸಂಘಗಳ ನೊಂದಣಿ ಕಾಯ್ದೆ 1960ರ ಕಲಂ 27–ಎ (1) (ಸಿ) ರನ್ವಯ ಉಪ ನಿಬಂಧಕರು ದಾವಣಗೆರೆ ಜಿಲ್ಲೆ ದಾವಣಗೆರೆ ಇವರನ್ನು ಆಡಳಿತಾಧಿಕಾರಿಯನ್ನಾಗಿ 6 ತಿಂಗಳ ಅವಧಿಗೆ ನೇಮಿಸಿ ಆದೇಶಿಸಿದೆ.

ಮೇಲೆ ಓದಲಾದ ಕ್ರಮ ಸಂ. (2) ರ ದಿನಾಂಕ: 15/06/2009ರ ಪತ್ರದಲ್ಲಿ ಆಡಳಿತಾಧಿಕಾರಿಗಳು ಶ್ರೀ ಉಚ್ಚೆಂಗೆಮ್ಮ ವಿದ್ಯಾ ಸಂಸ್ಥೆ ಉಚ್ಚುಂಗಿ ದುರ್ಗ ಹರಪ್ಪನಹಳ್ಳಿ ತಾಲ್ಲೂಕು ಇವರು ಸಂಘ ಸಂಸ್ಥೆಗಳ ಜಿಲ್ಲಾ ನೊಂದಣಾಧಿಕಾರಿಯಾಗಿ ನಾನು ಕರ್ತವ್ಯ ನಿರ್ವಹಿಸುತ್ತಿದ್ದು, ಸಂಘದ ಆಡಳಿತಾಧಿಕಾರಿಯಾಗಿ ಕಾರ್ಯ ನಿರ್ವಹಿಸಿ ಸಂಸ್ಥೆಯ ವಾರ್ಷಿಕ ಮಹಾ ಸಭೆ ಜರುಗಿಸಿ ವಾರ್ಷಿಕ ಲೆಕ್ಕ ಪತ್ರಗಳನ್ನು ಮತ್ತು ಮುಂದಿನ ಆಡಳಿತ ಮಂಡಳಿಯನ್ನು ನಾನೆ ಅನುಮೋದಿಸಬೇಕಾಗಿರುವುದರಿಂದ ಈ ಎರಡು ಕೆಲಸಗಳಲ್ಲಿ ಅಧಿಕಾರ ಚಲಾಯಿಸುವುದು ಸೂಕ್ತವಲ್ಲ ಹಾಗೂ ಸಂಘ ಸಂಸ್ಥೆಗಳು ನಡೆಸುತ್ತಿರುವ ಶಾಲಾ ಕಾಲೇಜುಗಳ ಸಿಬ್ಬಂದಿಗಳ ಅನುಧಾನ ಮಂಜುರಾತಿ ಸಂಬಂಧದಲ್ಲಿ 3 ಅಧಿಕಾರಿಗಳ ಸಮಿತಿಯಲ್ಲಿ ನಾನು ಒಬ್ಬ ಸದಸ್ಯನಾಗಿದ್ದು ಸಹಿ ಮಾಡಬೇಕಾಗಿರುತ್ತದೆ. ಈ 2 ಕಾರ್ಯಗಳು ನೊಂದಣಾಧಿಕಾರಿಯಾಗಿ ವರದಿ ಮಾಡುವ ಅಧಿಕಾರಿ ಮತ್ತು ಅಂಗೀಕರಿಸುವ ಅಧಿಕಾರಿಯಾಗಿ ಕಾರ್ಯನಿರ್ವಹಿಸಬೇಕಾಗಿರುವುದರಿಂದ ಕಾನೂನಿಗೆ ವಿರುದ್ಧವಾಗಿರುತ್ತದೆ. ಆದ್ದರಿಂದ ದಿನಾಂಕ:10.06.2009ರ ಆದೇಶವನ್ನು ಮಾರ್ಪಾಡು ಮಾಡಿ ಉಪ ವಿಭಾಗಾಧಿಕಾರಿಗಳು ಕಂದಾಯ ಇಲಾಖೆ ಅಥವಾ ಸಹಕಾರ ಸಂಘಗಳ ಸಹಾಯಕ ನಿಬಂಧಕರನ್ನು ಆಡಳಿತಾಧಿಕಾರಿಯನ್ನಾಗಿ ನೇಮಿಸುವಂತೆ ಕೋರಿರುತ್ತಾರೆ.

ಮೇಲಿನ ಪ್ರಸ್ತಾವನೆಗಳನ್ನು ಪರಿಶೀಲಿಸಿದ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 60 ಸಸಂನೋ 2009 ಬೆಂಗಳೂರು, ದಿನಾಂಕ: 20ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಿನಾಂಕ:10–06–2009ರ ಆದೇಶವನ್ನು ಭಾಗಸಹ ಮಾರ್ಪಡಿಸಿ ಶ್ರೀ ಉಚ್ಚಂಗೆಮ್ಮ ವಿದ್ಯಾ ಸಂಸ್ಥೆ (ಎಸ್.ಸಿ) ಉಚ್ಚಂಗಿ ದುರ್ಗ ಹರಪನಹಳ್ಳಿ ತಾಲ್ಲೂಕು ಸಂಸ್ಥೆಗೆ ಕರ್ನಾಟಕ ಸಂಘಗಳ ನೊಂದಣಿ ಕಾಯ್ದೆ 1960 ರ ಕಲಂ 27ಎ(1)(ಸಿ) ರನ್ವಯ ಸರ್ಕಾರಕ್ಕೆ ನಿಹಿತವಾಗಿರುವ ಅಧಿಕಾರವನ್ನು ಚಲಾಯಿಸಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹರಪ್ಪನಹಳ್ಳಿ ಉಪ ವಿಭಾಗ ಹರಪ್ಪನಹಳ್ಳಿ ಇವರನ್ನು ಆಡಳಿತಾಧಿಕಾರಿಯಾಗಿ 6(ಆರು) ತಿಂಗಳ ಅವಧಿಗೆ ಅಥವಾ ಸದರಿ ಅವಧಿಯಲ್ಲಿ ಆಡಳಿತ ಮಂಡಳಿಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಿಸಿದೆ.

ಆಡಳಿತಾಧಿಕಾರಿಗಳು ಸದರಿ ಅವಧಿಯಲ್ಲಿ ಆಡಳಿತ ಮಂಡಳಿಯ ಅವ್ಯವಹಾರಗಳನ್ನು ಸರಿಪಡಿಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಸೂಚಿಸಿದೆ. ಆಡಳಿತಾಧಿಕಾರಿಗಳು ತೆಗೆದುಕೊಂಡ ಕ್ರಮಗಳ ಬಗ್ಗೆ ಸರ್ಕಾರಕ್ಕೆ ಮಾಹಿತಿಯನ್ನು ಸಹ ಒದಗಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1680

**ನಂಜುಂಡಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ

**ವಿಷಯ:** ಶಿವಮೊಗ್ಗದ ದೇಶೀಯ ವಿದ್ಯಾಶಾಲಾ ಸಮಿತಿ ಶಿವಮೊಗ್ಗ ಇದರ ಆಡಳಿತಾಧಿಕಾರಿಗಳ ಅವಧಿ ವಿಸ್ತರಣೆ ಬಗ್ಗೆ.

**ಓದಲಾಗಿದೆ:** 1. ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ಇವರ ಪತ್ರ ಸಂಖ್ಯೆ:ಆರ್‌ಸಿಎಸ್/ಎಡಿಎಂ/295/ ಎಸ್‌ಓಆರ್/ 2009–10 ದಿನಾಂಕ:13–07–2009

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ:13–07–2009ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ಇವರು ದೇಶೀಯ ವಿದ್ಯಾಶಾಲಾ ಸಮಿತಿ ಶಿವಮೊಗ್ಗ ಇದರ ಆಡಳಿತಾಧಿಕಾರಿಗಳ ಅವಧಿಯನ್ನು ದಿ:06–06–2008 ರಿಂದ 05–12–2008ರ ವರೆಗೆ ಮತ್ತು 06–12–2008 ರಿಂದ 05–06–2009ರ ವರೆಗೆ ವಿಸ್ತರಿಸಿ ಸದರಿ ಅವಧಿಯಲ್ಲಿ ಆಡಳಿತಾಧಿಕಾರಿಗಳು ಕಡ್ಡಾಯವಾಗಿ ಮೇಲ್ಕಂಡ ಸಂಸ್ಥೆಯ ಆಡಳಿತ ಮಂಡಳಿಗೆ ಚುನಾವಣೆ ಜರುಗಿಸಿ ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸುವಂತೆ ಆದೇಶಿಸಲಾಗಿತ್ತೆಂದು ತಿಳಿಸಿರುತ್ತಾರೆ. ಸದರಿ ಅವಧಿಯಲ್ಲಿ ಕೆಲವೊಂದು ತೊಂದರೆಗಳಿಂದ ಚುನಾವಣೆಯನ್ನು ನಡೆಸಲು ಸಾಧ್ಯವಾಗಿರುವುದಿಲ್ಲ. ಆದ್ದರಿಂದ ಆಡಳಿತಾಧಿಕಾರಿಗಳ ಅವಧಿಯನ್ನು ದಿ:06–06–2009 ರಿಂದ ಮುಂದಿನ 6 ತಿಂಗಳಿಗೆ ವಿಸ್ತರಿಸುವಂತೆ ಆಡಳಿತಾಧಿಕಾರಿಗಳು ಕೋರಿರುವುದಾಗಿ ವರದಿ ಮಾಡಿರುತ್ತಾರೆ.

ಆಡಳಿತಾಧಿಕಾರಿಗಳು ಸಲ್ಲಿಸಿರುವ ವರದಿಯ ಹಿನ್ನಲೆಯಲ್ಲಿ ಆಡಳಿತಾಧಿಕಾರಿಗಳ ಅವಧಿಯನ್ನು ಕರ್ನಾಟಕ ಸಂಘಗಳ ನೊಂದಣಿ ಕಾಯ್ದೆ 1960ರ ಕಲಂ 27 (ಎ) ಪ್ರಕಾರ 06–06–2009 ರಿಂದ ಮತ್ತೆ 6 ತಿಂಗಳ ಅವಧಿಗೆ ವಿಸ್ತರಿಸಿ ಈ ವಿಸ್ತರಣಾ ಅವಧಿಯೊಳಗೆ ಆಡಳಿತಾಧಿಕಾರಿಗಳು ಕಡ್ಡಾಯವಾಗಿ ಸಂಸ್ಥೆಯ ಕಾರ್ಯಕಾರಿ ಸಮಿತಿಯ ಚುನಾವಣೆಯನ್ನು ನಡೆಸಿ, ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸಲು ಸೂಚಿಸಿ ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 90 ಸಸಂನೋ 2009 ಬೆಂಗಳೂರು, ದಿನಾಂಕ: 16ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶಿವಮೊಗ್ಗದ ದೇಶೀಯ ವಿದ್ಯಾಶಾಲಾ ಸಮಿತಿ ಶಿವಮೊಗ್ಗ ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27 (ಎ) ರನ್ವಯ ಸರ್ಕಾರಕ್ಕೆ ನಿಹಿತವಾಗಿರುವ ಅಧಿಕಾರವನ್ನು ಚಲಾಯಿಸಿ ಆಡಳಿತಾಧಿಕಾರಿಯಾಗಿ ನೇಮಕವಾಗಿರುವ ಉಪ ವಿಭಾಗಾಧಿಕಾರಿಗಳು ಶಿವಮೊಗ್ಗ ಉಪ ವಿಭಾಗ, ಶಿವಮೊಗ್ಗ ಇವರ ಆಡಳಿತಾಧಿಕಾರಿಯ ಅವಧಿಯನ್ನು ದಿನಾಂಕ:06–06–2009 ರಿಂದ ಮತ್ತೆ 6 ತಿಂಗಳ ಅವಧಿಗೆ ವಿಸ್ತರಿಸಿ ಆದೇಶಿಸಿದೆ.

ಆಡಳಿತಾಧಿಕಾರಿಗಳು ಸದರಿ ಅವಧಿಯಲ್ಲಿ ಕಡ್ಡಾಯವಾಗಿ ಆಡಳಿತ ಮಂಡಳಿಯ ಚುನಾವಣೆಯನ್ನು ನಡೆಸಿ ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಸೂಚಿಸಿದೆ. ಆಡಳಿತಾಧಿಕಾರಿಗಳು ತೆಗೆದುಕೊಂಡ ಕ್ರಮಗಳ ಬಗ್ಗೆ ಸರ್ಕಾರಕ್ಕೆ ಮಾಹಿತಿಯನ್ನು ಸಹ ಒದಗಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1749

**ನಂಜುಂಡಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ:** ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ (ವಾರ್ಷಿಕ ಕಾರ್ಯ ನಿರ್ವಹಣಾ ವರದಿ) ನಿಯಮ 2000 ರನ್ವಯ ಕೆ.ಎ.ಎಸ್.ಅಧಿಕಾರಿಗಳ ವಾರ್ಷಿಕ ಕಾಯನಿರ್ವಹಣಾ ವರದಿಗಳಲ್ಲಿ ವರದಿ ಪ್ರಾಧಿಕಾರ, ಪುನರಾವಲೋಕನ ಪ್ರಾಧಿಕಾರ ಮತ್ತು ಅಂಗೀಕರಿಸುವ ಪ್ರಾಧಿಕಾರಗಳನ್ನು ಗುರುತಿಸುವ ಬಗ್ಗೆ.

**ಓದಲಾಗಿದೆ:** 1) ಆದೇಶ ಸಂಖ್ಯೆ:ಸಿಆಸುಇ 134 ಆಸೇಇ 2001 ದಿನಾಂಕ:8–4–02

2) ಆದೇಶ ಸಂಖ್ಯೆ:ಸಿಆಸುಇ 153 ಆಸೇಇ 2007 ದಿನಾಂಕ:10–8–07

3) ದಿನಾಂಕ:4–11–08 ರಂದು ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಗಳು.

4) ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ ಮೈಸೂರು ಇವರ ಅ.ಸ.ಪ.ಸಂಖ್ಯೆ:ಸಿಬ್ಬಂದಿ(1)ಸಿಆರ್: 58:2009–10 ದಿನಾಂಕ: 19–05–2009.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ಆದೇಶದ ಅನುಬಂಧ 1 ರಲ್ಲಿ ಕೆ.ಎ.ಎಸ್. ಗ್ರೂಪ್–ಎ ಅಧಿಕಾರಿಗಳ ಕಾರ್ಯ ನಿರ್ವಹಣಾ ವರದಿಗಳಲ್ಲಿ ವರದಿ ಮಾಡುವ ಪ್ರಾಧಿಕಾರ, ಪುನರಾವಲೋಕನ ಪ್ರಾಧಿಕಾರ ಮತ್ತು ಅಂಗೀಕರಿಸುವ ಪ್ರಾಧಿಕಾರಗಳನ್ನು ಗುರುತಿಸಿ ಆದೇಶ ಹೊರಡಿಸಲಾಗಿತ್ತು. ಕ್ರಮ ಸಂಖ್ಯೆ(2) ರಲ್ಲಿ ಓದಲಾದ ಆದೇಶದಲ್ಲಿ ಪರಿಶೀಲನಾ ಪ್ರಾಧಿಕಾರವಾಗಿ ಗುರುತಿಸಿರುವ "ವಿಭಾಗಾಧಿಕಾರಿಗಳು" ಎಂಬುದರ ಬದಲಾಗಿ "ಪ್ರಾದೇಶಿಕ ಆಯುಕ್ತರು" ಎಂದು ಮಾರ್ಪಡಿಸಿ ಆದೇಶ ಹೊರಡಿಸಲಾಗಿತ್ತು. ಮೇಲೆ ಕ್ರಮ ಸಂಖ್ಯೆ(3) ರಲ್ಲಿ ಓದಲಾದ ನಡವಳಿಯಲ್ಲಿ ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ದಿನಾಂಕ:4–11–08 ರಂದು ಜರುಗಿದ ಸಭೆಯ ನಡವಳಿಯ ನಿರ್ಣಯದಂತೆ ವಾರ್ಷಿಕ ಕಾರ್ಯನಿರ್ವಹಣಾ ವರದಿಯಲ್ಲಿ ಪುನರಾವಲೋಕನ ಪ್ರಾಧಿಕಾರವೆಂದು ನಮೂದಿಸಲು ಅಧಿಕಾರವನ್ನು ಪ್ರತ್ಯಾಯೋಜಿಸಲಾದ ಪ್ರಾದೇಶಿಕ ಆಯುಕ್ತರುಗಳನ್ನು ಜಿಲ್ಲಾಧಿಕಾರಿಗಳ ಕಾರ್ಯ ನಿರ್ವಹಣಾ ವರದಿಯ ವರದಿ ಪ್ರಾಧಿಕಾರವೆಂದು ಮತ್ತು ಉಪವಿಭಾಗಾಧಿಕಾರಿಗಳ ಮತ್ತು ವಿಶೇಷ ಭೂಸ್ವಾಧೀನಾಧಿಕಾರಿಗಳ ಕಾರ್ಯ ನಿರ್ವಹಣಾ ವರದಿಯ ಪುನರಾವಲೋಕನ ಪ್ರಾಧಿಕಾರವೆಂದು ಅಧಿಕಾರ ಪ್ರತ್ಯಾಯೋಜಿಸಲು ನಡವಳಿಯಲ್ಲಿ ನಿರ್ಣಯಿಸಲಾಗಿದೆ. ಮೇಲೆ ಓದಲಾದ ಕ್ರಮ ಸಂಖ್ಯೆ(4) ರಲ್ಲಿ ಪ್ರಾದೇಶಿಕ ಆಯುಕ್ತರು ಮೈಸೂರು ವಿಭಾಗ ಮೈಸೂರು ಇವರು ಉಪವಿಭಾಗಾಧಿಕಾರಿಗಳ ಹಾಗೂ ವಿಶೇಷ ಭೂಸ್ವಾಧೀನಾಧಿಕಾರಿಗಳ ಕಾರ್ಯ ನಿರ್ವಹಣಾ ವರದಿಯ ಪುನರಾವಲೋಕನ ಪ್ರಾಧಿಕಾರವೆಂಬ ಬಗ್ಗೆ ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ. ಉಪವಿಭಾಗಾಧಿಕಾರಿ, ವಿಶೇಷ ಭೂಸ್ವಾಧೀನಾಧಿಕಾರಿಗಳನ್ನು ಒಳಗೊಂಡಂತೆ ಪ್ರಾದೇಶಿಕ ಆಯುಕ್ತರ ವ್ಯಾಪ್ತಿಗೆ ಒಳಪಡುವ ಇತರೆ ಹುದ್ದೆಗಳನ್ನು ಒಳಗೊಂಡಂತೆ ಪುನರಾವಲೋಕನಾ ಪ್ರಾಧಿಕಾರವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 98 ಆಸೇವ 2009, ಬೆಂಗಳೂರು, ದಿನಾಂಕ: 25ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಪರಿಶೀಲಿಸಿ ಕೆ.ಎ.ಎಸ್. ಸಮೂಹ–ಎ (ಕಿರಿಯ ಶ್ರೇಣಿ – ಹಿರಿಯ ಶ್ರೇಣಿ) ಅಧಿಕಾರಿಗಳಿಗೆ ಸಂಬಂಧಿಸಿದಂತೆ ಅನುಬಂಧ – "ಅ" ದಲ್ಲಿ ಇರುವಂತೆ ಕರ್ನಾಟಕ ಸಿವಿಲ್ ಸೇವೆಗಳು ನಿಯಮ (ಕಾರ್ಯ ನಿರ್ವಹಣಾ ವರದಿ) 2000 ನಿಯಮ 11 ರನ್ವಯ ಪ್ರಾದೇಶಿಕ ಆಯುಕ್ತರುಗಳನ್ನು ಪುನರಾವಲೋಕನಾ ಪ್ರಾಧಿಕಾರವೆಂದು ಆದೇಶಿಸಲಾಗಿದೆ. ಹಾಗೆಯೇ ವರದಿ ಪ್ರಾಧಿಕಾರ ಮತ್ತು ಅಂಗೀಕಾರ ಪ್ರಾಧಿಕಾರವನ್ನು ಗುರುತಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–2)

## ಅನುಬಂಧ– ಅ

## ಕಾರ್ಯ ನಿರ್ವಹಣಾ ವರದಿಯ ವಿವಿಧ ಪ್ರಾಧಿಕಾರಗಳು

| ಕ್ರ. ಸಂ. | ಹುದ್ದೆ | ಹಾಲಿಯಿರುವ ಪ್ರಾಧಿಕಾರಗಳು | | | ಈಗ ಅನುಮೋದಿತವಾಗಿರುವ ಪ್ರಾಧಿಕಾರಗಳು | | |
|---|---|---|---|---|---|---|---|
| | | ವರದಿ ಪ್ರಾಧಿಕಾರ | ಪುನರಾವಲೋಕನ ಪ್ರಾಧಿಕಾರ | ಅಂಗೀಕಾರ ಪ್ರಾಧಿಕಾರ | ವರದಿ ಪ್ರಾಧಿಕಾರ | ಪುನರಾವಲೋಕನ ಪ್ರಾಧಿಕಾರ | ಅಂಗೀಕಾರ ಪ್ರಾಧಿಕಾರ |
| 1 | ಅಪರ ಪ್ರಾದೇಶಿಕ ಆಯುಕ್ತರು | – | – | – | ಪ್ರಾದೇಶಿಕ ಆಯುಕ್ತರು | ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ | ಮುಖ್ಯ ಕಾರ್ಯದರ್ಶಿ |
| 2 | ಉಪವಿಭಾಗಾಧಿಕಾರಿ | ಜಿಲ್ಲಾಧಿಕಾರಿ | ಕಂದಾಯ ಆಯುಕ್ತರು/ ಪ್ರಾದೇಶಿಕ ಆಯುಕ್ತರು | ಮುಖ್ಯ ಕಾರ್ಯದರ್ಶಿ | ಜಿಲ್ಲಾಧಿಕಾರಿ | ಪ್ರಾದೇಶಿಕ ಆಯುಕ್ತರು | ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ |
| 3 | ವಿಶೇಷ ಭೂಸ್ವಾಧೀನಾಧಿಕಾರಿ | ವಿಶೇಷ ಜಿಲ್ಲಾಧಿಕಾರಿ/ ಜಿಲ್ಲಾಧಿಕಾರಿ | ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ. | ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ. | ಜಿಲ್ಲಾಧಿಕಾರಿ | ಪ್ರಾದೇಶಿಕ ಆಯುಕ್ತರು | ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ |
| 4 | ಅಪರ ಜಿಲ್ಲಾಧಿಕಾರಿಗಳು ಹಾಗೂ ಅಪರ ಜಿಲ್ಲಾ ದಂಡಾಧಿಕಾರಿಗಳು (ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರು) | ಜಿಲ್ಲಾಧಿಕಾರಿ | ಪ್ರಾದೇಶಿಕ ಆಯುಕ್ತರು | ಆಯುಕ್ತರು, ಕಂದಾಯ ಇಲಾಖೆ | ಜಿಲ್ಲಾಧಿಕಾರಿ | ಪ್ರಾದೇಶಿಕ ಆಯುಕ್ತರು | ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ |
| 5 | ಸಹಾಯಕ ಆಯುಕ್ತರು, ಅನಧಿಕೃತ ಕಟ್ಟಡಗಳ ನಿರ್ಮಾಣ ತಡೆ ಕೋಶ. | ಜಿಲ್ಲಾಧಿಕಾರಿ | ಆಯುಕ್ತರು, ಕಂದಾಯ ಇಲಾಖೆ / ಪ್ರಾದೇಶಿಕ ಆಯುಕ್ತರು | ಮುಖ್ಯ ಕಾರ್ಯದರ್ಶಿ | ಜಿಲ್ಲಾಧಿಕಾರಿ | ಪ್ರಾದೇಶಿಕ ಆಯುಕ್ತರು | ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ |
| 6 | ಮನೆಬಾಡಿಗೆ ನಿಯಂತ್ರಣಾಧಿಕಾರಿ. | ಜಿಲ್ಲಾಧಿಕಾರಿ | ಆಯುಕ್ತರು, ಕಂದಾಯ ಇಲಾಖೆ / ಪ್ರಾದೇಶಿಕ ಆಯುಕ್ತರು | ಮುಖ್ಯ ಕಾರ್ಯದರ್ಶಿ | ಜಿಲ್ಲಾಧಿಕಾರಿ | ಪ್ರಾದೇಶಿಕ ಆಯುಕ್ತರು | ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ |
| 7 | ವಿಶೇಷ ಭೂಸ್ವಾಧೀನಾಧಿಕಾರಿ, ಕಬಿನಿ ಯೋಜನೆ, ಚಾಮರಾಜನಗರ | ಜಿಲ್ಲಾಧಿಕಾರಿ | ಪ್ರಾದೇಶಿಕ ಆಯುಕ್ತರು | ಆಯುಕ್ತರು, ಕಂದಾಯ ಇಲಾಖೆ | ಜಿಲ್ಲಾಧಿಕಾರಿ | ಪ್ರಾದೇಶಿಕ ಆಯುಕ್ತರು | ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ |
| 8 | ವಿಶೇಷ ಭೂಸ್ವಾಧೀನಾಧಿಕಾರಿ, ಕಾರಂಜ ಯೋಜನೆ, ಬೀದರ್ | ಜಿಲ್ಲಾಧಿಕಾರಿ | ಪ್ರಾದೇಶಿಕ ಆಯುಕ್ತರು | ಆಯುಕ್ತರು, ಕಂದಾಯ ಇಲಾಖೆ | ಜಿಲ್ಲಾಧಿಕಾರಿ | ಪ್ರಾದೇಶಿಕ ಆಯುಕ್ತರು | ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ |
| 9 | ವಿಶೇಷ ಭೂಸ್ವಾಧೀನಾಧಿಕಾರಿ, ಹೇಮಾವತಿ ಯೋಜನೆ, ಹಾಸನ / ತುಮಕೂರು | ಜಿಲ್ಲಾಧಿಕಾರಿ | ಪ್ರಾದೇಶಿಕ ಆಯುಕ್ತರು | ಆಯುಕ್ತರು, ಕಂದಾಯ ಇಲಾಖೆ | ಜಿಲ್ಲಾಧಿಕಾರಿ | ಪ್ರಾದೇಶಿಕ ಆಯುಕ್ತರು | ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ |

**ಎಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–2)

ಪಿ.ಆರ್. 1673

**ವಿಷಯ:** ಶ್ರೀ ಬಿ.ಸಿ. ಮುದೋಳ್. ನಿವೃತ್ತ ಮುಖ್ಯ ಇಂಜಿನಿಯರ್, ಅವರ ವಿರುದ್ಧ ಇಲಾಖೆ ವಿಚಾರಣಾ ಮಂಡನಾಧಿಕಾರಿ ನೇಮಕ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 51 ಎಸ್ ಇ ಎನ್ 05, ದಿನಾಂಕ: 08.06.2007

2. ಸರ್ಕಾರದ ಆದೇಶ ಸಂಖ್ಯೆ: 51 ಎಸ್ಇಎನ್ 05, ದಿನಾಂಕ: 22.09.2008

3. ಸರ್ಕಾರದ ಆದೇಶ ಸಂಖ್ಯೆ: 51 ಎಸ್ಇಎನ್ 05, ದಿನಾಂಕ: 27.02.2009.

4. ಮುಖ್ಯ ಇಂಜಿನಿಯರ್ (ಅಂತರ ರಾಜ್ಯ) ಜಲಸಂಪನ್ಮೂಲ ಅಭಿವೃದ್ಧಿ ಸಂಸ್ಥೆ, ಇವರ ಪತ್ರ ದಿನಾಂಕ:10.06.2009

**ಪ್ರಸ್ತಾವನೆ:–**

ಶ್ರೀ ಬಿ. ಸಿ ಮುದೋಳ್, ನಿವೃತ್ತ ಮುಖ್ಯ ಇಂಜನಿಯರ್, ಅವರು ಬಾಗಲಕೋಟೆ ನಗರ ಅಭಿವೃದ್ಧಿ ಪ್ರಾಧಿಕಾರದಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, ಪ್ರಾಧಿಕಾರದ ವ್ಯಾಪ್ತಿಯಲ್ಲಿ 300 ಕಾಮಗಾರಿಗಳ ಅಂದಾಜು ಪಟ್ಟಿಯನ್ನು ಸಿದ್ದಪಡಿಸದೇ ತಮಗೆ ಬೇಕಾದ ಕಂಟ್ರಕ್ಟರುಗಳಿಗೆ ನೀಡಿ, ಅವುಗಳು ಪೂರ್ಣಗೊಳ್ಳದೆ ಅರ್ಧಕ್ಕೆ ನಿಂತಿದ್ದರೂ ಸಹ ಅವುಗಳಗುಣಮಟ್ಟ, ಅರಿಯದೇ

ಪೂರ್ಣ ಹಣವನ್ನು ಪಾವತಿ ಮಾಡಿದ್ದು, ಆಲಮ್ ಕೂರಿನ್ ಮತ್ತು ಪ್ರಾಧಿಕಾರಕ್ಕೆ ಅವಶ್ಯಕತೆಗಿಂತ ಹೆಚ್ಚಾಗಿ ವಾಟರ್ ಮೀಟರ್ ಖರೀಧಿಯಲ್ಲಿ ಅವ್ಯವಹಾರ ಎಸಗಿ ಪಾರದರ್ಶಕತೆ ಕಾಯಿದೆಗಳನ್ನು ಪಾಲಿಸದೆ ಸರ್ಕಾರದ ಹಣವನ್ನು ದುರುಪಯೋಗಪಡಿಸಿರುವ ಆರೋಪಿಗಳಿಗಾಗಿ ಶ್ರೀ ಬಿ.ಸಿ ಮುಧೋಳ್ ಅವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11, 11–ಎ, ರನ್ವಯ ಇಲಾಖಾ ವಿಚಾರಣೆ ಜರುಗಿಸಲು ಮೇಲೆ(1)ರಲ್ಲಿ ಓದಲಾದ ದಿನಾಂಕ: 08.06.2007ರ ಸರ್ಕಾರದ ಆದೇಶದಲ್ಲಿ ಶ್ರೀ ಬಿ. ರಂಗಸ್ವಾಮಿ ನಿವೃತ್ತ ಜಿಲ್ಲಾ ನ್ಯಾಯಾದೀಶರನ್ನು ವಿಚಾರಣಾಧಿಕಾರಿಯಾಗಿ ಮತ್ತು ಶ್ರೀಮತಿ ಹೇಮಲತಾ, ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯಿತ್, ಉಡುಪಿ ಇವರನ್ನು ಮಂಡನಾಧಿಕಾರಿಯಾಗಿ ನೇಮಿಸಲಾಗಿತ್ತು. ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಶ್ರೀಮತಿ ಹೇಮಲತಾ ಇವರು ಮನವಿ ಸಲ್ಲಿಸಿ, ಮಂಡನಾಧಿಕಾರಿಯಾಗಿ ಕಾರ್ಯನಿರ್ವಹಿಸಲು ಸಾಧ್ಯವಾಗುವುದಿಲ್ಲವಾದ ಕಾರಣ ಈ ಪ್ರಕರಣದ ಮಂಡನಾಧಿಕಾರಿ ಜವಾಬ್ದಾರಿಯಿಂದ ಬಿಡುಗಡೆಗೊಳಿಸುವಂತೆ ಕೋರಿರುವ ಹಿನ್ನಲೆಯಲ್ಲಿ ದಿನಾಂಕ: 22.09.2008ರಂದು ಶ್ರೀ ಪಾಲಯ್ಯ, ನಿಬಂಧಕರು, ಜಲಸಂಪನ್ಮೂಲ ಅಭಿವೃದ್ಧಿ ಸಂಸ್ಥೆ, ಆನಂದರಾವ್ ವೃತ್ತ, ಬೆಂಗಳೂರು, ಇವರನ್ನು ಮಂಡನಾಧಿಕಾರಿಯಾಗಿ ನೇಮಕ ಮಾಡಲಾಗಿತ್ತು. ನಂತರ ಓದಲಾದ ಕ್ರಮ ಸಂಖ್ಯೆ (3)ರಲ್ಲಿ ಮಂಡನಾಧಿಕಾರಿಯಾಗಿ ನೇಮಕವಾಗಿದ್ದ ಶ್ರೀ ಪಾಲಯ್ಯ ಇವರ ಬದಲಿಗೆ ಶ್ರೀ ಕೆ.ಆರ್. ಶ್ರೀನಿವಾಸ ರಂಗನ್, ಕಾರ್ಯಪಾಲಕ ಇಂಜಿನಿಯರ್ ಕೃಷ್ಣ ಗೋದಾವರಿ ಘಟಕ ಮತ್ತು ರಾಜ್ಯ ಜಲ, ಜಲ ಸಂಪನ್ಮೂಲ ಸಂಸ್ಥೆ, ಬೆಂಗಳೂರು ಇವರನ್ನು ನೇಮಕ ಮಾಡಲಾಗಿತ್ತು, ಕ್ರಮ ಸಂಖ್ಯೆ (4)ರಲ್ಲಿ ಮುಖ್ಯ ಇಂಇನಿಯರ್, (ಅಂತರ ರಾಜ್ಯ) ಜಲಸಂಪನ್ಮೂಲ ಅಭಿವೃದ್ಧಿ ಸಂಸ್ಥೆ, ಬೆಂಗಳೂರು ಇವರು ಮನವಿ ಸಲ್ಲಿಸಿ ಶ್ರೀ ಕೆ.ಆರ್. ಶ್ರೀನಿವಾಸ ರಂಗನ್, ಕಾರ್ಯಪಾಲಕ ಇಂಜಿನಿಯರ್, ಇವರಿಗೆ ಕಾರ್ಯದ ಒತ್ತಡ ಹಾಗೂ ಕೃಷ್ಣ ನ್ಯಾಯಾಧೀಕರಣ ಕಲಾಪಗಳು ತ್ವರಿತ ಗತಿಯಲ್ಲಿ ನಡೆಯುತ್ತಿರುವುದರಿಂದ ಇವರ ಬದಲು ಶ್ರೀ ಆರ್. ರಂಗನಾಥ, ಕಾರ್ಯಪಾಲಕ ಇಂಜಿನಿಯರ್, ಕಾವೇರಿ ಜಲ ವಿವಾದ ಘಟಕ, ಜಲಸಂಘನ್ಮೂಲ ಅಭಿವೃದ್ಧಿ ಸಂಸ್ಥೆ, ಬೆಂಗಳೂರು ಇವರನ್ನು ಮಂಡನಾಧಿಕಾರಿಯಾಗಿ ನೇಮಿಸುವಂತೆ ಕೋರಿರುತ್ತಾರೆ. ಈ ಬಗ್ಗೆ ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 51 ಎಸ್ಇಎನ್ 2005, ಬೆಂಗಳೂರು, ದಿನಾಂಕ: 6ನೇ ಜುಲೈ 2009**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 51 ಎಸ್ ಇಎನ್ 2005, ದಿನಾಂಕ: 22.09.2008ನ್ನು ಭಾಗಶ: ಮಾರ್ಪಡಿಸಿ, ಶ್ರೀ ಕೆ.ಆರ್. ಶ್ರೀನಿವಾಸ ರಂಗನ್ ಕಾರ್ಯಪಾಲಕ ಇಂಜಿನಿಯರ್ ಕೃಷ್ಣ ಗೋದಾವರಿ ಘಟಕ ಮತ್ತು ರಾಜ್ಯ ಜಲ, ಜಲ ಸಮಘನ್ಮೂಲ ಸಂಸ್ಥೆ, ಬೆಂಗಳೂರು, ಇವರ ಸ್ಥಾನದಲ್ಲಿ ಶ್ರೀ ಆರ್. ರಂಗನಾಥ, ಕಾರ್ಯಪಾಲಕ ಇಂಜಿನಿಯರ್, ಕಾವೇರಿ ಜಲ ವಿವಾದ ಘಟಕ, ಜಲಸಂಘನ್ಮೂಲ ಅಭಿವೃದ್ಧಿ ಸಂಸ್ಥೆ, ಬೆಂಗಳೂರು, ಇವರನ್ನು ಈ ಪ್ರಕರಣದಲ್ಲಿ ಮಂಡನಾಧಿಕಾರಿಯನ್ನಾಗಿ ಕರ್ನಾಟಕ ನಾಗರೀಕ ಸೇವಾ(ಮೇಲ್ಮನವಿ, ವರ್ಗೀಕರಣ ಮತ್ತು ನಿಯಂತ್ರಣ). ನಿಯಮ 11(15)(ಸಿ) ಅನ್ವಯ ನೇಮಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 1675

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. (ಸೇವೆಗಳು–3)

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ:** 2009–10ನೇ ಸಾಲಿನಲ್ಲಿ ಶಿವಮೊಗ್ಗ ಆಹಾರ ಪಾರ್ಕ್ ಯೋಜನೆ ಅನುಷ್ಠಾನಕ್ಕೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ: ವಾಕೈ 88 ಆಂಆಸ(1) 2009 ದಿನಾಂಕ 22.04.2009
2. ವಿಶೇಷಾಧಿಕಾರಿ, ಆಹಾರ ಕರ್ನಾಟಕ ನಿಯಮಿತ ರವರ ಪತ್ರ ಸಂಖ್ಯೆ:ಎಫ್‌ಕೆಎಲ್/17/2009–10 ದಿ:18.05.2009.
3. ಅಧಿಕ ನಿರ್ದೇಶಕರು (ಸಪ್ರಕೈ), ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ರವರ ಪತ್ರ ಸಂಖ್ಯೆ: ಸಪ್ರಕೈ/ಎಸ್1/ಆಹಾರ ಪಾರ್ಕ್/17/2009–10 ದಿನಾಂಕ 29–05–2009.
4. ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ ಪತ್ರ ಸಂಖ್ಯೆ:ಸಿಐ 352 ಎಸ್‌ಪಿಐ 2008(ಪಿ) ದಿನಾಂಕ 19.06.2009.
5. ಅಧಿಕ ನಿರ್ದೇಶಕರು (ಸಪ್ರಕೈ), ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ರವರ ಪತ್ರ ಸಂಖ್ಯೆ: ಸಪ್ರಕೈ/ಎಸ್1/ಆಹಾರ ಪಾರ್ಕ್/17/2009–10 ದಿನಾಂಕ 23.06.2009.
6. ಸರ್ಕಾರಿ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2008 ದಿನಾಂಕ 16.05.2008

**ಪ್ರಸ್ತಾವನೆ:**

ಅಧಿಕ ನಿರ್ದೇಶಕರು (ಸಪ್ರಕೈ), ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ರವರು ಮೇಲೆ ಓದಲಾದ (2)ರ ಪತ್ರ ದಿನಾಂಕ 29.05.2009 ರಲ್ಲಿ ಮೆ:ಆಹಾರ ಕರ್ನಾಟಕ ನಿಯಮಿತ ರವರು ಮೇಲೆ ಓದಲಾದ (1) ರ ಪತ್ರ ದಿನಾಂಕ 18.05.2009 ಮಾಲೂರು, ಹಿರಿಯೂರು, ಜೇವರ್ಗಿ ಮತ್ತು ಬಾಗಲಕೋಟೆ ಆಹಾರ ಪಾರ್ಕ್‌ಗಳು ಅನುಷ್ಠಾನ ಹಂತದಲ್ಲಿರುವುದರಿಂದ ಮತ್ತು ಪಾರ್ಕ್‌ಗಳ ಅಭಿವೃದ್ಧಿ ಕಾರ್ಯ ಕೈಗೊಳ್ಳಬೇಕಾಗಿರುವುದರಿಂದ 2009–10ನೇ ಸಾಲಿನಲ್ಲಿ ಒದಗಿಸಿರುವ ಅನುದಾನದಲ್ಲಿ ರೂ.386.25 ಲಕ್ಷಗಳನ್ನು ಬಿಡುಗಡೆ ಮಾಡಲು ಕೋರಿರುತ್ತಾರೆ.

2009–10ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ 4851–00–800–5–00–132 Capital Expenses "ಶಿವಮೊಗ್ಗ ಆಹಾರ ಪಾರ್ಕ್" ಅಡಿಯಲ್ಲಿ ಆಹಾರ ಪಾರ್ಕ್‌ಗಳ ಅಭಿವೃದ್ಧಿಗೋಸ್ಕರ ರೂ.1000.00 ಲಕ್ಷಗಳ ಅನುದಾನ ಲಭ್ಯವಿರುತ್ತದೆ.

ಈ ಮೊತ್ತವನ್ನು ಬಂಡವಾಳ ವೆಚ್ಚದ ಅಡಿ 'ಆಹಾರ ಪಾರ್ಕ್ ಶಿವಮೊಗ್ಗ' ಎಂದು ನಿರ್ದಿಷ್ಟವಾಗಿ ನಮೂದಿಸಿದ್ದು, ಈಗ ಶಿವಮೊಗ್ಗ ಹೊರತುಪಡಿಸಿ ಇತರ ಸ್ಥಳದ ಪ್ರಸ್ತಾವನೆಗೆ ಹಣ ಬಿಡುಗಡೆ ಮಾಡಲು ಪ್ರಸ್ತಾಪಿಸಲಾಗಿದೆ. ಈ ಬಗ್ಗೆ ಸರಿಯಾಗಿ ಪರಿಶೀಲಿಸಿ ಮುಂದಿನ ಕ್ರಮ ಕೈಗೊಳ್ಳಲು ಆಂತರಿಕ ಆರ್ಥಿಕ ಸಲಹೆಗಾರರು ಹಾಗೂ ಸರ್ಕಾರದ ಉಪ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ ರವರು ಟಿಪ್ಪಣಿ ಸಂಖ್ಯೆ:ವಾಕೈ 144 ಆಂಆಸ(1) 2009 ದಿನಾಂಕ:19.06.2009 ರಲ್ಲಿ ಸೂಚಿಸಿರುತ್ತಾರೆ.

2009–10ನೇ ಸಾಲಿನಲ್ಲಿ ಮಾಲೂರು, ಹಿರಿಯೂರು, ಜೇವರ್ಗಿ ಮತ್ತು ಬಾಗಲಕೋಟೆ ಆಹಾರ ಪಾರ್ಕ್‌ಗಳು ಅನುಷ್ಠಾನಗೊಳಿಸಲು ಇತರೆ ಲೆಕ್ಕಶೀರ್ಷಿಕೆಯಡಿಯಲ್ಲಿ ಹಣ ಲಭ್ಯವಿಲ್ಲದ ಕಾರಣ ಲೆಕ್ಕಶೀರ್ಷಿಕೆ 4851–00–800–5–00–132 "ಶಿವಮೊಗ್ಗ ಆಹಾರ್ ಪಾರ್ಕ್" ನ್ನು ಸಾಮಾನ್ಯ ಲೆಕ್ಕಶೀರ್ಷಿಕೆಯೆಂದು ಪರಿಗಣಿಸಿ ಶಿವಮೊಗ್ಗ ಆಹಾರ ಪಾರ್ಕ್‌ಗೆ ರೂ.1.00 ಕೋಟಿ ಮತ್ತು ರೂ.286.25 ಲಕ್ಷಗಳನ್ನು ಮಾಲೂರು, ಹಿರಿಯೂರು, ಜೇವರ್ಗಿ ಮತ್ತು ಬಾಗಲಕೋಟೆ ಆಹಾರ ಪಾರ್ಕ್‌ಗಳ ಅನುಷ್ಠಾನಕ್ಕೆ ಅನುದಾನ ಬಿಡುಗಡೆ ಮಾಡಲು ಅಧಿಕ ನಿರ್ದೇಶಕರು (ಸಪ್ರಕೈ), ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ರವರು ಮೇಲೆ ಓದಲಾದ (5)ರ ಪತ್ರ ದಿನಾಂಕ 23.06.2009 ರಲ್ಲಿ ಕೋರಿರುತ್ತಾರೆ.

ಆದುದರಿಂದ ಈ ಕೆಳಕಂಡ ಆದೇಶ:

**ಸರ್ಕಾರಿ ಆದೇಶ ಕ್ರಮ ಸಂಖ್ಯೆ: ಸಿಐ 352 ಎಸ್‌ಪಿಐ 2008, ಬೆಂಗಳೂರು, ದಿನಾಂಕ: 24ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, 2009–10ನೇ ಸಾಲಿನಲ್ಲಿ ಶಿವಮೊಗ್ಗ ಆಹಾರ ಪಾರ್ಕ್ ಯೋಜನೆ ಅನುಷ್ಠಾನಕ್ಕಾಗಿ ರೂ.1.00 ಕೋಟಿ ಅನುದಾನವನ್ನು ಈ ಮೂಲಕ ಬಿಡುಗಡೆ ಮಾಡಲಾಗಿದೆ.

ಸದರಿ ಮೊತ್ತವನ್ನು ವಿಶೇಷ ಅಧಿಕಾರಿ, ಆಹಾರ ಕರ್ನಾಟಕ ನಿಯಮಿತ, ಬೆಂಗಳೂರು ರವರು ಸ್ವೀಕೃತಿ ರಸೀದಿಯ ಮೇಲೆ ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆರವರ ಮೇಲು ರುಜು ಪಡೆದು ಖಜಾನೆಯಿಂದ ಡ್ರಾ ಮಾಡಲು ಆದೇಶಿಸಿದೆ.

ಈ ಮೊತ್ತವನ್ನು 2009–10 ಸಾಲಿನಲ್ಲಿ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯ ಲೆಕ್ಕಶೀರ್ಷಿಕೆ 4851–00–800–5–00–132 Capital Expenses "ಶಿವಮೊಗ್ಗ ಆಹಾರ ಪಾರ್ಕ್" ಅಡಿಯಲ್ಲಿ ಆಹಾರ ಪಾರ್ಕ್‌ಗಳ ಅಭಿವೃದ್ಧಿಗೋಸ್ಕರ ರೂ.1000.00 ಲಕ್ಷಗಳ ಅನುದಾನದ ಅಡಿ ಲಭ್ಯವಿರುವ ಆಯವ್ಯಯದಿಂದ ಭರಿಸುವುದು.

ಟಿಪ್ಪಣಿ ಸಂಖ್ಯೆ:ವಾಕೈ 155 ಆಂಆಸ(1) 2009 ದಿನಾಂಕ 24.06.2009 ರಲ್ಲಿ ಆಂತರಿಕ ಆರ್ಥಿಕ ಸಲಹೆಗಾರರು ಹಾಗೂ ಸರ್ಕಾರದ ಉಪ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ ರವರ ಒಪ್ಪಿಗೆ ಪಡೆಯಲಾಗಿದೆ.

ಆರ್ಥಿಕ ಇಲಾಖೆ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2008 ದಿನಾಂಕ 16.5.2008 ರನ್ವಯ ಕಾರ್ಯದರ್ಶಿಗಳಿಗೆ ಅನುದಾನ ಬಿಡುಗಡೆ ಮಾಡಲು ಪ್ರತ್ಯಾಯೋಜಿಸಿರುವ ಅಧಿಕಾರದಡಿ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1681 **ಅಪರ್ಣ ಪಾವಟೆ**

ಪೀಠಾಧಿಕಾರಿ (ತಾಂತ್ರಿಕ ಕೋಶ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ನವೀದ್ ಅಹ್ಮದ್, ಪಿ.ಸಿ.–893, ಶಿರಾ ಪೊಲೀಸ್ ಠಾಣೆ, ತುಮಕೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ತುಮಕೂರು, ಇವರ ಆದೇಶ ಸಂಖ್ಯೆ:ಪನ್ಸಿ: ಡಿಇ:5/2002 ಓ.ಬಿ:14/2002–03 ದಿ:08–04–2003

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು, ಇವರ ಆದೇಶ ಸಂಖ್ಯೆ:ಅಪೀಲು: 9/03–04 ಓ.ಬಿ:46:03–04 ದಿ:17–07–2003
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:06–01–09
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)108/2008–09 ದಿನಾಂಕ:21–04–2009

**ಪ್ರಸ್ತಾವನೆ:**

ಶ್ರೀ ನವೀದ್ ಅಹ್ಮದ್, ಪಿ.ಸಿ.–893, ಶಿರಾ ಪೊಲೀಸ್ ಠಾಣೆ, ತುಮಕೂರು ಜಿಲ್ಲೆ, (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ ಹಾಗೂ ದುರ್ನಡತೆಯನ್ನು ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷರೋಪಣೆ:–**

> " ದಿ:20–03–2002 ರಂದು ರಾತ್ರಿ ಸಿ.ಎಚ್.ಸಿ.–167, ಕೆಂಚಯ್ಯ, ರವರು ದೇವಗಡ ಜೆ.ಎಂ.ಎಫ್.ಸಿ. ನ್ಯಾಯಾಲಯದ ಸಿಸಿ ನಂ:979:2000ರ ವಾರೆಂಟ್ ಆಸಾಮಿ ಸಿರಾ ವಾಸಿ ಮಹ್ಮದ್ ಇಸ್ಮಾಯಿಲ್ ಎಂಬುವವರನ್ನು ಕರೆತಂದು ಠಾಣೆಗೆ ಹಾಜರ ಪಡಿಸುವುದರ ಸಿದ್ದತೆಯಲ್ಲಿರುವಾಗ ನಮ್ಮನ್ನು ಆತನ ಬೆಂಗಾವಲು ಕರ್ತವ್ಯಕ್ಕೆ ನೇಮಕ ಮಾಡಿ ದಾಖಲೆಗಳಲ್ಲಿ ನಮೂದಿಸಿದ್ದರೂ ಸಹ ಸದರಿ ಆಸಾಮಿಯನ್ನು ಊಟ ಮಾಡಿಸಿಕೊಂಡು ಬರುವ ನೆಪೊಡ್ಡಿ ಠಾಣೆಯಿಂದ ಕರೆದುಕೊಂಡು ಹೋಗುತ್ತಿದ್ದಾಗ್ಯೆ, ಠಾಣಾ ಎಸ್‌ಎಚ್‌ಒ, ಎಚ್.ಸಿ.–123, ರವರು ಬೇಡವಂತ ಹೇಳಿದ್ದಾಗ್ಯೂ ಅವರ ಮಾತನ್ನು ಧಿಕ್ಕರಿಸಿ ಹೊರಗಡೆ ಕರೆದುಕೊಂಡು ಹೋದವರು ಆಮಿಶಗಳಿಗೆ ಬಲಿಯಾಗಿ ವಾರೆಂಟ್ ಆಸಾಮಿಯೊಂದಿಗೆ ಶಾಮೀಲಾಗಿ, ಆತನನ್ನು ಬಿಟ್ಟು ಪೊಲೀಸ್ ವಶದಿಂದ ತಪ್ಪಿಸಿಕೊಳ್ಳಲು ಸಹಕರಿಸಿ, ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತೆ ಹಾಗೂ ದುರ್ನಡತೆ ತೋರಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ತುಮಕೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 08–04–03ರ ಆದೇಶದಲ್ಲಿ "ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಬೀರುವಂತೆ ಒಂದು ವರ್ಷ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿ ದಿ:04–06–2002 ರಿಂದ 08–09–2002 ರವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದ್ದಾರೆ. "

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:17–07–03ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪುರಸ್ಕರಿಸುವಂತಹ ಹೊಸ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 19 ಪೊಸಿಅ 2009 ಬೆಂಗಳೂರು, ದಿನಾಂಕ: 26ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ನವೀದ್ ಅಹ್ಮದ್, ಪಿ.ಸಿ.–893, ಶಿರಾ ಪೊಲೀಸ್ ಠಾಣೆ, ತುಮಕೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1690

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಸ್.ಆರ್. ಪಾಟೀಲ್, ಪಿ.ಐ., ನಾಹಜಾನಿ ಪೋಲೀಸ್ ಠಾಣೆ, ಬಾಗಲಕೋಟೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೋಲೀಸ್ ಅಧೀಕ್ಷಕರು, ಬೆಳಗಾವಿ ಇವರ ಆದೇಶ ಸಂಖ್ಯೆ:ಸಿಬ್ಬಂದಿ–2ವ/ಪಿಆರ್/105/2007 ಆ.ಪು. ಸಂ:538/07 ದಿ:15–05–2007

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೋಲೀಸ್ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರ ಆದೇಶ ಸಂಖ್ಯೆ:ಅಪೀಲು/166 4/ಉವ/2007 ದಿನಾಂಕ:10–12–2007

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:06–08–08

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8)79/2008–09 ದಿ:19–03–2009

**ಪ್ರಸ್ತಾವನೆ:**

ಶ್ರೀ ಎಸ್.ಆರ್. ಪಾಟೀಲ್, ಪಿ.ಐ., ನಾಹಜಾನಿ ಪೋಲೀಸ್ ಠಾಣೆ ಬಾಗಲಕೋಟೆ, ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಬೆಳಗಾವಿ ಮಾರ್ಕೆಟ್ ಪೋಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೋಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7 ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷರೋಪಣೆ:–**

> "ಆಪಾದಿತ ಪೋಲೀಸ್ ಅಧಿಕಾರಿಯಾದ ನೀವು ಮಾರ್ಕೆಟ್ ಪೋಲೀಸ್ ಠಾಣೆಯ ಗುನ್ನಾ ನಂ.12/2002 ನೇದ್ದರ ಪ್ರಕರಣದ ತನಿಖೆಯನ್ನು ಸಮರ್ಪಕವಾಗಿ ಪೂರ್ಣ ಪ್ರಮಾಣದಲ್ಲಿ ಕೈಕೊಳ್ಳದೇ ತನಿಖೆಯಲ್ಲಿ ಸಾಕಷ್ಟು ಲೋಪದೋಷಗಳನ್ನು ಎಸಗಿರುವುದಲ್ಲದೆ, ನ್ಯಾಯಾಲಯಕ್ಕೆ ಹಾಜರಾಗಿ ಸಾಕ್ಷಿ ನುಡಿಯಲು ವಿಫಲರಾಗಿ ಪ್ರಕರಣವು ನ್ಯಾಯಾಲಯದಲ್ಲಿ ಬಿಡುಗಡೆಯಾಗಲು ಕಾರಣೀಭೂತರಾಗಿ ನಿಮ್ಮ ಕರ್ತವ್ಯದಲ್ಲಿ ಘೋರ ನಿಷ್ಕಾಳಜಿತನ ಹಾಗೂ ಬೇಜವಾಬ್ದಾರಿತನವನ್ನು ಪ್ರದರ್ಶಿಸಿರುವಿರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೋಲೀಸ್ ಅಧೀಕ್ಷಕರು, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 15–05–07ರ ಆದೇಶದಲ್ಲಿ "ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಒಂದು ವರ್ಷಕಾಲ ಮುಂದೂಡುವ ದಂಡನೆ ವಿಧಿಸಿರುತ್ತಾರೆ."

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೋಲೀಸ್ ಮಹಾ ನಿರೀಕ್ಷಕರು, ಉತ್ತರವಲಯ, ಬೆಳಗಾವಿ, ಇವರು ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶ: ಮಾರ್ಪಡಿಸಿ, ಇವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ತದನಂತರದ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಆರು ತಿಂಗಳ ಕಾಲ ಮುಂದೂಡಿ, ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:10–12–07ರಲ್ಲಿ ಆದೇಶಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನಿಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 313 ಪೊಸಿಅ 2008 ಬೆಂಗಳೂರು, ದಿನಾಂಕ: 25ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೋಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ಆರ್. ಪಾಟೀಲ್, ಪಿ.ಐ., ನಾಹಜಾನಿ ಪೋಲೀಸ್ ಠಾಣೆ ಬಾಗಲಕೋಟೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1691

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೋಲೀಸ್ ಸೇವೆಗಳು)

**ವಿಷಯ:** ಶ್ರೀ ಮುರಳೀಧರ, ಮಾಜಿ ಸಿ.ಪಿ.ಸಿ.–428, ಟಿ. ನರಸೀಪುರ, ಪೊಲೀಸ್ ಠಾಣೆ, ಮೈಸೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮೈಸೂರು ಜಿಲ್ಲೆ, ಇವರ ಆದೇಶ ಸಂಖ್ಯೆ: ಡಿಇ:20/05–06, ಓ.ಬಿ/ಸಿವಿಲ್/212/ 06–07 ದಿ:26–01–07

2) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:20–08–2008

3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)68/2008–09 ದಿ:02–12–2008

4) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:ಪಿಎಸ್‌ಸಿ 5 ಸಿಎನ್‌ಎಸ್ 09 ದಿನಾಂಕ:18.05.2009

**ಪ್ರಸ್ತಾವನೆ:**

ಶ್ರೀ ಮುರಳೀಧರ, ಇವರು ಟಿ.ಎನ್. ಪುರದಲ್ಲಿ ಸಿ.ಪಿ.ಸಿ. ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಸರ್ಕಾರದ ಹಣ ದುರುಪಯೋಗ ಹಾಗೂ ಅನಧಿಕೃತವಾಗಿ ಗೈರುಹಾಜರಾದ ಆರೋಪದ ಹಿನ್ನೆಲೆಯಲ್ಲಿ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷರೋಪಣೆ:–**

1. ಡಿವೈ.ಎಸ್.ಪಿ., ಹುಣಸೂರು ಉಪ–ವಿಭಾಗದ ಕಛೇರಿಯಿಂದ ಜಮಾ ಮಾಡಲು ಕಳುಹಿಸಿದ್ದ 2004ನೇ ಸಾಲಿನ ಸಶಸ್ತ್ರ ಪಡೆಗಳ ಧ್ವಜ ದಿನಾಚರಣೆ ಅಂಗವಾಗಿ ರೂ.5080/– ಗಳನ್ನು ಜಿಲ್ಲಾ ಪೊಲೀಸ್ ಕಛೇರಿಗೆ ಜಮಾ ಮಾಡದೇ ದುರುಪಯೋಗ ಪಡಿಸಿಕೊಂಡಿರುವ ಬಗ್ಗೆ.
2. ದಿ:21–04–05 ರಿಂದ ಇದುವರೆವಿಗೂ ಅನಧಿಕೃತ ಗೈರು ಹಾಜರಿಯಾಗಿರುವ ಬಗ್ಗೆ.
3. ದಿ:21–04–05 ರಿಂದ ಅನಧಿಕೃತ ಗೈರುಹಾಜರಿಯಾದ ಸಂಬಂಧ ಡೆಸರ್ಟರ್ ನೋಟಿಸ್ ಹೊರಡಿಸಿದ್ದು, ನೋಟಿಸ್‌ನಲ್ಲಿ ನೀಡಿದ ಸೂಚನೆಯಂತೆ ಕರ್ತವ್ಯಕ್ಕೆ ಹಿಂದಿರುಗದೇ ಮೇಲಾಧಿಕಾರಿಗಳ ಆದೇಶವನ್ನು ಉಲ್ಲಂಘಿಸಿರುವ ಬಗ್ಗೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ:26–01–07ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಿ, ದಿನಾಂಕ:21–04–2005 ರಿಂದ 13–07–2006ರ ವರೆಗೆ ಗೈರು ಹಾಜರಾದ ಅವಧಿಯನ್ನು ವೇತನ ರಹಿತ ರಜೆಯೆಂದು ಪರಿಗಣಿಸಿದ್ದಾರೆ.

ಶಿಸ್ತು ಪ್ರಾಧಿಕಾರದ ಆದೇಶದ ವಿರುದ್ಧ ಮೇಲ್ಮನವಿ ಪ್ರಾಧಿಕಾರಕ್ಕೆ ಮೇಲ್ಮನವಿಯನ್ನು ಸಲ್ಲಿಸದೆ ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿದ್ದಾರೆ.

ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರ ವಿರುದ್ಧದ ಆರೋಪವು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿದೆ ಆದರೆ ಮಾನವೀಯ ದೃಷ್ಠಿಯಿಂದ ಶಿಸ್ತುಪ್ರಾಧಿಕಾರದ ದಂಡನಾದೇಶವನ್ನು ಭಾಗಶ: ಮಾರ್ಪಡಿಸಲು ಸರ್ಕಾರವು ತೀರ್ಮಾನಿಸಿ, ಈ ಕುರಿತು ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಓದಲಾದ (4)ರ ಪತ್ರದಲ್ಲಿ ಪಡೆದು, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 294 ಪೊಸಿಅ 2008 ಬೆಂಗಳೂರು, ದಿನಾಂಕ: 26ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಮುರಳೀಧರ, ಮಾಜಿ ಸಿ.ಪಿ.ಸಿ.–428, ಟಿ. ನರಸೀಪುರ, ಮೈಸೂರು ಜಿಲ್ಲೆ, ಇವರಿಗೆ ಶಿಸ್ತುಪ್ರಾಧಿಕಾರ ವಿಧಿಸಿದ ದಂಡನಾದೇಶವನ್ನು ಭಾಗಶ: ಮಾರ್ಪಡಿಸಿ ಶಿಸ್ತು ಪ್ರಾಧಿಕಾರದ ಆದೇಶ ದಿ:26–01–07 ರಿಂದಲೇ ಜಾರಿಗೆ ಬರುವಂತೆ "ಕಡ್ಡಾಯ ನಿವೃತ್ತಿಗೊಳಿಸಿ" ಆದೇಶಿಸಿದೆ. ದಿನಾಂಕ: 21–04–05 ರಿಂದ 13–07–06 ರವರೆಗೆ ಗೈರು ಹಾಜರಾದ ಅವಧಿಯನ್ನು ವೇತನರಹಿತ ರಜೆ ಎಂದು ಪರಿಗಣಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1692

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಬಸವರಾಜ ಕಡಕೋಳ, ಪಿ.ಐ., ಗ್ರಾಮಾಂತರ ಪೊಲೀಸ್ ಠಾಣೆ, ಬಾಲ್ಕಿ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ:ಪಿಆರ್:128/2007 ಡಿಓಬಿ ಸಂ:2062/07 ದಿ:05–11–2007

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ:ಅಪೀಲು/15 ಈವ/2008 ಅ.ಪು.ಸಂ:219/ಈವ/2008 ದಿ:02–04–2008

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:20–07–08

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಸಿಬಿ(8) 48/2008–09 ದಿ:09–09–2008

5) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:ಪಿಎಸ್‌ಸಿ 119 ಸಿಎನ್‌ಎಸ್ 08 ದಿನಾಂಕ:25.03.2009

**ಪ್ರಸ್ತಾವನೆ:**

ಶ್ರೀ ಬಸವರಾಜ ಕಡಕೋಳ, ಪಿ.ಐ., ಇವರು ಶಹಾಬಾದ ನಗರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ದುರ್ನಡತೆ ಹಾಗೂ ಅಶಿಸ್ತು ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7 ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷರೋಪಣೆ:–**

"ನೀವು ಈ ಕಾರ್ಯಾಲಯದ ಪಿ.ಆರ್.ಸಂಖ್ಯೆ:91/ಗು/ 2006 ದಿನಾಂಕ:30–05–2006, 28–12–2006 ನೇದ್ದರಕ್ಕೆ ಉತ್ತರ ಸಲ್ಲಿಸದೆ ಮತ್ತು ಮೇಲಾಧಿಕಾರಿಯವರ ಆದೇಶವನ್ನು ಪಾಲನೆ ಮಾಡದೆ ಕರ್ತವ್ಯದಲ್ಲಿ ದುರ್ನಡತೆ ಹಾಗೂ ಅಶಿಸ್ತು ಪ್ರದರ್ಶಿಸಿದ ಬಗ್ಗೆ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ, ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ:05–11–2007ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಒಂದು ವರ್ಷಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗೆ ದಕ್ಕೆಯಾಗದಂತೆ ಮುಂದೂಡುವ ದಂಡನೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರು ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಮಾರ್ಪಡಿಸಿ, ಇವರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಪರಿಣಾಮ ಬೀರದಂತೆ ಮೂರು ತಿಂಗಳ ಕಾಲ ಮುಂದೂಡುವ ದಂಡನೆಯನ್ನು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿ:02–04–2008ರ ಆದೇಶದಲ್ಲಿ ಮಾರ್ಪಡಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಅರ್ಜಿದಾರರಿಗೆ ವಿಧಿಸಿದ ದಂಡನೆಯು ಆರೋಪಕ್ಕೆ ಅನುಗುಣವಾಗಿಲ್ಲವೆಂದು ಪರಿಗಣಿಸಿ ದಂಡನಾದೇಶವನ್ನು ಮಾರ್ಪಡಿಸುವ ಸಲುವಾಗಿ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 227 ಪೊಸಿಅ 2008 ಬೆಂಗಳೂರು, ದಿನಾಂಕ: 26ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಸವರಾಜ ಕಡಕೋಳ, ಪಿ.ಐ., ಬಾಲ್ಕಿ, ಇವರಿಗೆ ಮೇಲ್ಮನವಿ ಪ್ರಾಧಿಕಾರ ವಿಧಿಸಿದ ದಂಡನಾದೇಶವನ್ನು ಮಾರ್ಪಡಿಸಿ, `ವಾಗ್ದಂಡನೆ`ಯನ್ನು ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1693 **ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಡಿ. ಶಿವಲಿಂಗಯ್ಯ ಎಚ್.ಸಿ.–30, ಹೆಬ್ಬೂರು ಪೊಲೀಸ್ ಠಾಣೆ, ತುಮಕೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ತುಮಕೂರು ಜಿಲ್ಲೆ, ಇವರ ಆದೇಶ ಸಂಖ್ಯೆ:ಪನ್ನಿ/ಡಿಇ/07/ 2006–07 ಓ.ಬಿ:20/2008 ದಿ:09–01–2008

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು, ಇವರ ಆದೇಶ ಸಂಖ್ಯೆ:ಅಪೀಲು–4/2008–09 ಓ.ಬಿ:48/2007 ದಿನಾಂಕ:19–06–2008

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:26–09–08

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)80/2008–09 ದಿ:18–04–2009

**ಪ್ರಸ್ತಾವನೆ:**

ಶ್ರೀ ಡಿ. ಶಿವಲಿಂಗಯ್ಯ ಎಚ್.ಸಿ.–30, ಹೆಬ್ಬೂರು ಪೊಲೀಸ್ ಠಾಣೆ, ತುಮಕೂರು ಜಿಲ್ಲೆ, (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಜಿಲ್ಲಾ ಪೊಲೀಸ್ ಕಛೇರಿಯ ಡಿ.ಸಿ.ಐ.ಬಿ ವಿಭಾಗದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ ಹಾಗೂ ದುರ್ನಡತೆಯನ್ನು ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷರೋಪಣೆ:–**

ಶ್ರೀ ಶಿವಲಿಂಗಯ್ಯ ಡಿ. ಎಚ್.ಸಿ.–30, [ಹಿಂದೆ ಡಿ.ಸಿ.ಐ.ಬಿ. ಡಿ.ಪಿ.ಓ. ತುಮಕೂರು] ಹಾಲಿ ತಿರುಮಣಿ ಠಾಣೆ ತುಮಕೂರು ಜಿಲ್ಲೆ:

"ಈ ಬಗ್ಗೆ ನಿಮ್ಮನ್ನು ಜಿಲ್ಲಾ ಪೊಲೀಸ್ ಕಛೇರಿ ಆದೇಶ ಸಂಖ್ಯೆ:ಪನ್ನಿ/09/2006–07 ದಿ:05–05–2006, ಓ.ಬಿ.ನಂ:49/06 ರಲ್ಲಿ ಅಮಾನತ್ತುಗೊಳಿಸಿದ್ದು, ನಂತರ ಆದೇಶ ಸಂಖ್ಯೆ:ಪನ್ನಿ/09/2006–07 ದಿನಾಂಕ:01–06–2006, ಓ.ಬಿ:ನಂ:81/06 ರಲ್ಲಿ ಅಮಾನತ್ತಿನಿಂದ ಬಿಡುಗಡೆಗೊಳಿಸಿ ತಿರುಮಣಿ ಪೊಲೀಸ್ ಠಾಣೆಗೆ ವರ್ಗಾವಣೆ ಮಾಡಿ ಆದೇಶ ಹೊರಡಿಸಿರುತ್ತೆ. ಸದರಿ ಆದೇಶವನ್ನು ನೀವು ದಿ:12–06–2006 ರಂದು ಪಡೆದುಕೊಂಡು ಇದುವರೆವಿಗೂ ನೀವು ವರ್ಗಾವಣೆಯ ಸ್ಥಳವಾದ ತಿರುಮಣಿ ಠಾಣೆಯಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳದೇ ಆದೇಶವನ್ನು ಪಾಲಿಸದೆ ದಿಕ್ಕರಿಸಿ ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ ಹಾಗೂ ದುರ್ನಡತೆಯನ್ನು ತೋರಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ತುಮಕೂರು ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 09–01–08ರ ಆದೇಶದಲ್ಲಿ "ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ತದನಂತರದ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗುವಂತೆ ಎರಡು ವರ್ಷಗಳ ಕಾಲ ಮುಂದೂಡಿದ್ದಾರೆ ಹಾಗೂ ದಿ:05–05–06 ರಿಂದ 12–06–2006ರ ವರೆಗೆ ಹಾಗೂ 02–08–2006 ರಿಂದ 26–01–2007ರ ವರೆಗಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿ, ದಿ:13–06–2006 ರಿಂದ 01–08–2006ರ ವರೆಗಿನ ಅವಧಿಯನ್ನು ಸಂಬಳರಹಿತ ರಜೆ ಎಂದು ಪರಿಗಣಿಸಿದ್ದಾರೆ."

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:19–06–2008ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಇಲಾಖಾ ವಿಚಾರಣಾ ವರದಿಯಲ್ಲಿ ಇವರ ವಿರುದ್ಧದ ಆರೋಪವು ಸಾಬೀತಾಗಿದ್ದು, ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 331 ಪೊಸಿಅ 2008 ಬೆಂಗಳೂರು, ದಿನಾಂಕ: 4ನೇ ಜೂನ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಶಿವಲಿಂಗಯ್ಯ ಡಿ. ಎಚ್.ಸಿ.–30, ಹೆಬ್ಬೂರು ಪೊಲೀಸ್ ಠಾಣೆ, ತುಮಕೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1694

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಸಿದ್ದರಾಜು, ಮಾಜಿ ಪಿ.ಸಿ., ಕವಲಂದೆ ಪೊಲೀಸ್ ಠಾಣೆ, ಮೈಸೂರು, ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮೈಸೂರು ಜಿಲ್ಲೆ, ಇವರ ಆದೇಶ ಸಂಖ್ಯೆ:ಡಿಇ16/07–08 ಓ.ಬಿ:73/2008–09 ದಿ:08–07–2008

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ:ಅಪೀಲು/34/2008–09 ಓ.ಬಿ:33/2008–09 ದಿನಾಂಕ:06–11–2008

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:05–02–09

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)119/08–09 ದಿ:24–04–2009

**ಪ್ರಸ್ತಾವನೆ:**

ಶ್ರೀ ಸಿದ್ದರಾಜು, ಪಿ.ಸಿ., ಕವಲಂದೆ ಪೊಲೀಸ್ ಠಾಣೆ, ಇವರು ಮೈಸೂರಿನಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಅನಧಿಕೃತವಾಗಿ ಗೈರು ಹಾಜರಾದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷರೋಪಣೆ:–**

"ನೀವು ಪದೇ ಪದೇ ಅನಧಿಕೃತ ಗೈರು ಹಾಜರಿಯಾಗುವ ಹವ್ಯಾಸವುಳ್ಳವರಾಗಿದ್ದು, ಈ ಹಿಂದೆ ಗೈರು ಹಾಜರಿಯಾದ ಅವಧಿಗಳನ್ನು ಲಘು ಶಿಕ್ಷೆ ಹಾಗೂ ಕಠಿಣ ಶಿಕ್ಷೆ ವಿಧಿಸುವುದರ ಮೂಲಕ ಗೈರುಹಾಜರಿ ಅವಧಿಗಳನ್ನು ಇತ್ಯರ್ಥಪಡಿಸಿದ್ದರೂ ಸಹ ಈ ಹವ್ಯಾಸದಲ್ಲಿ ಯಾವುದೇ ಸುಧಾರಣೆಯಾಗದೇ ದಿ:26–08–07 ರಿಂದ 20–11–07ರ ವರೆಗೆ ಅನಧಿಕೃತ ಗೈರುಹಾಜರಿಯಾಗಿರುವುದರ ಮೂಲಕ ಬೇಜವಾಬ್ದಾರಿ, ನಿರ್ಲಕ್ಷತೆ ಹಾಗೂ ಅಶಿಸ್ತು ಪ್ರದರ್ಶಿಸಿರುವ ಬಗ್ಗೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 08–07–08ರ ಆದೇಶದಲ್ಲಿ ಅರ್ಜಿದಾರರನ್ನು ಕಡ್ಡಾಯ ನಿವೃತ್ತಿಗೊಳಿಸಲಾಗಿದೆ, ದಿ:26–08–07 ರಿಂದ 20–11–07 ರವರೆಗೆ ಅನಧಿಕೃತವಾಗಿ ಗೈರುಹಾಜರಾದ ಅವಧಿಯನ್ನು ವೇತನ ರಹಿತ ರಜೆಯೆಂದು ಪರಿಗಣಿಸಿದ್ದಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:06–11–08ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಇವರ ವಿರುದ್ಧದ ಆರೋಪವು ಸಾಬೀತಾಗಿದ್ದು, ಇವರ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

| Sources | Existing extension fee in Rs/MW | Proposed time extension fee in Rs per MW |
|---|---|---|
| All NCE sources | Nil | a) Rs.100000/MW for one year extension<br>b) Rs.200000/MW for two year extension<br>c) Rs.300000/MW for three year extension<br>d) Rs.500000/MW for four year extension<br>After fourth year if the project is not completed and commissioned, the Government has discretion to forfeit the project. |
| Fee is non refundable | | |

**Security Deposit:-**

The developer/power producer who has been allotted renewable energy project shall deposit a refundable amount of Rs.5 lakhs per MW as security deposit with Government towards completion of the project in the prescribed time period, at the time of execution of the agreement with the Government. The security deposit shall stand forfeited to Government in the event of failure of the power producer to adhere to the time scheduled to commission the project as per allotment agreement.

**Incentive and award scheme:-**

"Further it is proposed that if the developers completes and commissions the project successfully during the original agreement period, the developers will be awarded with a certificate of appreciation and a cash prize of one lakh per MW."

Since the existing fee which was formulated in 1999 requires revision, the proposal of the Managing Director, KREDL has been examined in detail and the following Orders issued :-

**Government Order No: EN 392 NCE 2008, Bangalore, Dated: 26th June 2009**

Government accords approval for the revision of fees for the NCE power projects as detailed below with immediate effect :-

| Sl. No. | Source | Application fee Rs per MW | Transfer fee Rs per MW | DPR Processing fee Rs. per MW |
|---|---|---|---|---|
| 1 | Wind | 10000 | 1% of the project cost | 500000 |
| 2 | Small Hydro | 10000 | 1% of the project cost | 500000 |
| 3 | Biomass | 10000 | 1% of the project cost | 500000 |
| 4 | Cogeneration | 10000 | 1% of the project cost | 500000 |
| 5 | Solar | 10000 | 0.1% of the project cost | 500000 |
| 6 | Pico Hydro | 1000 | - - | - - |
| 7 | Waste to Energy (MSW) | 10000 | - - | 100000 |
| 8 | Hybrid Systems | 1000 | - - | - - |
| FEES are non refundable | | | | |

| Sources | Time extension fee in Rs per MW |
|---|---|
| All NCE sources | a) Rs.100000/MW for one year extension<br>b) Rs.200000/MW for two year extension<br>c) Rs.300000/MW for three year extension<br>d) Rs.500000/MW for four year extension<br>After fourth year if the project is not completed and commissioned, the Government has discretion to forfeit the project. |
| Fee is non refundable | |

**Security Deposit:-**

The developer/power producer who has been allotted renewable energy project shall deposit a refundable amount of Rs.5 lakhs per MW as security deposit with Government towards completion of the project in the prescribed time period, at the time of execution of the agreement with the Government. The security deposit shall stand forfeited to Government in the event of failure of the power producer to adhere to the time scheduled to commission the project as per allotment agreement.

**Incentive and award scheme:-**

If the developer completes and commissions the project successfully during the original agreement period, the developers will be awarded with a certificate of appreciation and a cash prize of one lakh per MW.

By Order and in the name of Governor of Karnataka,

P.R. 1624

**S.J. SAMPATH KUMAR**

Under Secretary To Government, Energy Department.

**ಇಂಧನ ಸಚಿವಾಲಯ**

**ವಿಷಯ:** Refund of amounts spent and demurges in respect of 7 MW MHP by M/s Bhoruka Power Corporation Ltd.

**ಓದಲಾಗಿದೆ:**

1. ಸರ್ಕಾರಿ ಆದೇಶ ಸಂಖ್ಯೆ:ಡಿಇ 54 ಎನ್‌ಸಿಇ 99, ದಿನಾಂಕ:01–04–2000.
2. ಸರ್ಕಾರದೊಂದಿಗೆ ಮಾಡಿಕೊಂಡಿರುವ ಒಡಂಬಡಿಕೆ ದಿನಾಂಕ:19–06–2000.
3. ಸರ್ಕಾರಿ ಆದೇಶ ಸಂಖ್ಯೆ:ಡಿಇ 138 ಎನ್‌ಸಿಇ 2001, ದಿನಾಂಕ:13–09–2001.
4. ಆಯುಕ್ತರು, ಹಂಪಿ ವಿಶ್ವಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರ, ಹೊಸಪೇಟೆ ಇವರು ಮೆ: ಬೊರುಕಾ ಪವರ್ ಕಾರ್ಪೊರೇಷನ್ ಲಿಮಿಟೆಡ್‌ಗೆ ಬರೆದಿರುವ ಪತ್ರ ಸಂಖ್ಯೆ:ಹವಿಪಪ್ರನಿಪ್ರಾ/ಹೊ/ಸಭೆ/ನಡವಳಿ/2003–04, ದಿನಾಂಕ:13–10–2003.
5. ರಿಟ್ ಅರ್ಜಿ ಸಂಖ್ಯೆ:49500/2003.
6. ಘನ ಉಚ್ಚ ನ್ಯಾಯಾಲಯದ ಆದೇಶ ದಿನಾಂಕ:23–10–2008.
7. ಮೆ: ಬೊರುಕಾ ಪವರ್ ಕಾರ್ಪೊರೇಷನ್ ಲಿಮಿಟೆಡ್‌ರವರ ಪತ್ರ ದಿನಾಂಕ:21–11–2008.
8. ಕೆ.ಆರ್.ಇ.ಡಿ.ಎಲ್.ನ ಪತ್ರ ಸಂಖ್ಯೆ:ಕೆಆರ್‌ಇಡಿ/06/ಸಾನಾಪುರ ಎಂಹೆಚ್‌ಎಸ್/09/1307, ದಿನಾಂಕ:20–03–2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1)ರ ಸರ್ಕಾರಿ ಆದೇಶದಲ್ಲಿ, ಮೆ: ಬೊರುಕಾ ಪವರ್ ಕಾರ್ಪೊರೇಷನ್ ಲಿಮಿಟೆಡ್‌ಗೆ ಕೊಪ್ಪಳ ಜಿಲ್ಲೆಯ ಸಾನಾಪುರ ಗ್ರಾಮದ ಬಳಿ ಆನೆಗುಂಡಿ ಎಂಬಲ್ಲಿ ತುಂಗಭದ್ರಾ ನದಿಗೆ ಅಡ್ಡಲಾಗಿ 3.5 ಮೆ.ವ್ಯಾ. ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯನ್ನು ಕೆಲವು ಷರತ್ತುಗಳೊಂದಿಗೆ ಹಂಚಿಕೆ ಮಾಡಲಾಗಿತ್ತು.

ಸದರಿ ಆದೇಶದನ್ವಯ ಮೇಲೆ ಓದಲಾದ ಕ್ರಮಾಂಕ (2)ರಲ್ಲಿ ಸರ್ಕಾರದೊಂದಿಗೆ ಸದರಿ ಯೋಜನೆಯ ಸಂಬಂಧವಾಗಿ ಕಂಪನಿಯವರು ದಿನಾಂಕ:19–06–2000ರಂದು ಒಡಂಬಡಿಕೆಯನ್ನು ಮಾಡಿಕೊಂಡಿರುತ್ತಾರೆ. ಸದರಿ ಒಡಂಬಡಿಕೆಯ Clause 'm' ನ ಉದ್ಧೃತ ಭಾಗ ಕೆಳಕಂಡಂತಿದೆ:–

"m) The company shall ensure that the construction of the power house does not endanger either the dam or any other structure in the vicinity. If blasting operation etc., are to be restored to, the same shall be as stipulated by the Irrigation Department."

ಮೇಲೆ ಓದಲಾದ ಕ್ರಮಾಂಕ (3)ರ ಸರ್ಕಾರಿ ಆದೇಶದಲ್ಲಿ, ಹಂಚಿಕೆ ಮಾಡಲಾದ ಸಾಮರ್ಥ್ಯವನ್ನು 3.5 ಮೆ.ವ್ಯಾ.ನಿಂದ 7.00 ಮೆ.ವ್ಯಾ.ಗೆ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ.

ಮೆ: ಬೊರುಕಾ ಪವರ್ ಕಾರ್ಪೊರೇಷನ್ ಲಿಮಿಟೆಡ್ ಇವರು ದಿನಾಂಕ:18–09–2002ರಂದು ಹಂಪಿ ವಿಶ್ವಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರಕ್ಕೆ ಸಾನಾಪುರ ಗ್ರಾಮದ ಎಸ್. ನಂ.30ರಲ್ಲಿ ನದಿಯ ಮಾರ್ಗದಲ್ಲಿ 7.00 ಮೆ.ವ್ಯಾ. ಕಿರುಜಲ ವಿದ್ಯುತ್ ಉತ್ಪಾದನಾ ಸ್ಥಾವರವನ್ನು ಸ್ಥಾಪಿಸಲು ಅನುಮತಿಯನ್ನು ಕೋರಿ ಮನವಿಯನ್ನು ಸಲ್ಲಿಸಿದ್ದರು. ಸದರಿ ಮನವಿಯ ಬಗ್ಗೆ ಮೇಲೆ ಓದಲಾದ ಕ್ರಮಾಂಕ (4)ರ ಪತ್ರದಲ್ಲಿ, ಆಯುಕ್ತರು, ಹಂಪಿ ವಿಶ್ವಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರ, ಹೊಸಪೇಟೆ ಇವರು, ಈ ಕೆಳಕಂಡಂತೆ ಹಿಂಬರಹ ನೀಡಿದ್ದರು:–

" ದಿನಾಂಕ:19–06–2003ರಂದು Intach - Bangalore ಸಂಸ್ಥೆಯವರು ಪರಿಣಿತರೊಂದಿಗೆ ಸ್ಥಳ ತನಿಖೆ ಕೈಗೊಂಡು ಅವರು ಸೂಚಿಸಿದ ನ್ಯೂನತೆಗಳ ಬಗ್ಗೆ ಸಭೆಯಲ್ಲಿ ವಿಷಯ ಮಂಡಿಸಿ ಚರ್ಚಿಸಿ, ಜಲವಿದ್ಯುತ್ ಉತ್ಪಾದನಾ ಘಟಕಕ್ಕೆ ಅನುಮತಿಯನ್ನು ನೀಡಬಾರದೆಂದು ತೀರ್ಮಾನಿಸಿದ ಪ್ರಯುಕ್ತ ಈ ಮೂಲಕ ಹಿಂಬರಹವನ್ನು ನೀಡಲಾಗಿದೆ. ಪ್ರಾಧಿಕಾರದ ತೀರ್ಮಾನ ದಿನಾಂಕ:17–09–2003ರ ಪ್ರತಿಯನ್ನು ತಮ್ಮ ಅವಗಾಹನೆಗಾಗಿ ನೀಡಲಾಗಿದೆ."

ಅಭಿವೃದ್ಧಿದಾರರು ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಮೇಲೆ ಕ್ರಮಾಂಕ (5)ರಲ್ಲಿ ಓದಲಾದ ರಿಟ್ ಅರ್ಜಿ ಸಂಖ್ಯೆ:49500/2003ನ್ನು ದಾಖಲಿಸಿ ಈ ಕೆಳಕಂಡ ಅಂಶಗಳ ಕುರಿತು ಕೋರಿಕೆ ಸಲ್ಲಿಸಿದ್ದರು:–

"(a) Issue a Writ or order or direction in the nature of certiorari and quash the order/proceedings passed in No: :ಹವಿಪಪ್ರನಿಪ್ರಾ/ಹೊ/ಸಭೆ/ನಡವಳಿ/2003–04 by the Respondent No.1 on 13-10-2003 vide Annexure-'S'.

(b) Issue a Writ or order or direction in the nature of mandamus, directing the Respondents No.1 and 11 to permit the Petitioner to implement the Mini Hydel Power Project at Sanapur Village, Koppal District."

ಸದರಿ ರಿಟ್ ಅರ್ಜಿಯು ದಿನಾಂಕ: 23–10–2008ರಂದು ಇತ್ಯರ್ಥವಾಗಿದ್ದು, ಮೇಲೆ ಕ್ರಮಾಂಕ (6)ರಲ್ಲಿ ಓದಲಾದ ನ್ಯಾಯಾಲಯದ ಆದೇಶದಲ್ಲಿ ಘನ ಉಚ್ಚ ನ್ಯಾಯಾಲಯವು ಈ ಕೆಳಕಂಡಂತೆ ಆದೇಶ ನೀಡಿರುತ್ತದೆ:–

" If the petitioner is willing to approach the State of Karnataka for seeking refund of the amounts so spent, it is always open for the petitioner to approach the State of Karnataka. With the above said observation, the writ petition is dismissed as withdrawn. If any representation is given by the petitioner, the same shall be considered as early as possible by the State of Karnataka."

ಘನ ಉಚ್ಚ ನ್ಯಾಯಾಲಯದ ತೀರ್ಪಿನ ಹಿನ್ನೆಲೆಯಲ್ಲಿ, ಮೇಲೆ ಓದಲಾದ ಕ್ರಮಾಂಕ (7)ರ ಮನವಿಯನ್ನು ಮೆ: ಬೊರುಕಾ ಪವರ್ ಕಾರ್ಪೊರೇಷನ್ ಲಿಮಿಟೆಡ್ ಇವರು ಸರ್ಕಾರಕ್ಕೆ ನೀಡುತ್ತಾ, ಸದರಿಯವರಿಗೆ ಹಂಚಿಕೆಯಾಗಿದ್ದ 7.00 ಮೆ.ವ್ಯಾ. ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯನ್ನು ಸ್ಥಾಪಿಸಲು ಸದರಿಯವರು ವ್ಯಯ ಮಾಡಿರುವ ರೂ.1,25,87,656/–ಗಳನ್ನು ದಿನಾಂಕ:13–10–2003ರಿಂದ ಶೇಕಡ 12ರ ಬಡ್ಡಿದರದಲ್ಲಿ ಹಿಂಬರಿಸುವಂತೆ ಕೋರಿರುತ್ತಾರೆ. ಅಭಿವೃದ್ಧಿದಾರರ ಮನವಿಯನ್ನು ನೋಡಲ್ ಸಂಸ್ಥೆಯಾದ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರಿಗೆ ಕಳುಹಿಸಿ ಅವರ ಅಭಿಪ್ರಾಯವನ್ನು ಪಡೆಯಲಾಗಿದೆ.

ಮೇಲೆ ಓದಲಾದ ಕ್ರಮಾಂಕ (8)ರ ಪತ್ರದಲ್ಲಿ, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಈ ಕೆಳಗಿನಂತೆ ಅಭಿಪ್ರಾಯ ನೀಡಿರುತ್ತಾರೆ:–

" M/s BPCL is not entitled for the amount claimed as there is absolutely no violation of the terms & conditions of the agreement by the Government of Karnataka. None of the agreements stipulate that M/s BPCL will be entitled for any damages to be paid by Government of Karnataka if either the authorities delay in granting the permission or refuse to grant permission. But for the refusal by Hampi Heritage Pradhikar, the Government and its agencies have taken all the steps like granting permission etc and hence the Government cannot be held responsible to make the payment as requested as the agreement does not stipulate for compensation or damages.

It is also a fact that M/s BPCL has taken up the project knowing fully well about the clearances and the terms & conditions of the agreement. Under the circumstances, it is opined that the claim of M/s Bhoruka Power Corporation Ltd for refund of amount spent and demurrages in respect of 7 MW MHP across Tungabhadra river at Anegundi near Sanapura village in Koppal District cannot be considered."

ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಇವರ ಅಭಿಪ್ರಾಯದ ಹಿನ್ನೆಲೆಯಲ್ಲಿ ಪ್ರಕರಣ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 444 ಎನ್‌ಸಿಇ 2008, ಬೆಂಗಳೂರು, ದಿನಾಂಕ: 23ನೇ ಜೂನ್ 2009**

ಮೇಲೆ ವಿವರಿಸಲಾದ ಸನ್ನಿವೇಶದಲ್ಲಿ ಮೆ: ಬೊರುಕಾ ಪವರ್ ಕಾರ್ಪೊರೇಷನ್ ಲಿಮಿಟೆಡ್ ಇವರು ಕೊಪ್ಪಳ ಜಿಲ್ಲೆಯ ಸಾನಾಪುರ ಗ್ರಾಮದ ಬಳಿ ಆನೆಗುಂಡಿ ಎಂಬಲ್ಲಿ ತುಂಗಭದ್ರಾ ನದಿಗೆ ಅಡ್ಡಲಾಗಿ 7.00 ಮೆ.ವ್ಯಾ. ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆ ಅನುಷ್ಠಾನದ ನಿಟ್ಟಿನಲ್ಲಿ ವೆಚ್ಚ ಮಾಡಿರುವ ರೂ.1,25,87,656/–ಗಳನ್ನು ದಿನಾಂಕ:13–10–2003ರಿಂದ ಶೇಕಡ 12ರ ಬಡ್ಡಿ ದರದಲ್ಲಿ ಹಿಂಬರಿಸುವಂತೆ ಕೋರಿರುವ ಮನವಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1625

**ಎಸ್.ಜಿ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಮೆ:: ರೆನೊವೊ ಪವರ್ ಜೆನ್ ಪ್ರೈವೇಟ್ ಲಿಮಿಟೆಡ್ ರವರಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಳಸೇಶ್ವರ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ:**

1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಕಳಸೇಶ್ವರ/2007/2010 ದಿನಾಂಕ: 3/6.9.2007.
2. ದಿನಾಂಕ: 13.2.2009 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ:: ರೆನೊವೊ ಪವರ್ ಜೆನ್ ಪ್ರೈವೇಟ್ ಲಿಮಿಟೆಡ್‌ಗೆ ಚಿಕ್ಕಮಗಳೂರು ಜಿಲ್ಲೆಯ, ಮೂಡಿಗೆರೆ ತಾಲ್ಲೂಕು, ಕಳಸ ಗ್ರಾಮದ ಬಳಿ ಭದ್ರಾ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಳಸೇಶ್ವರ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ದಿನಾಂಕ: 13.2.2009 ರಂದು ನಡೆದ ಹಂಚಿಕೆ ಸಮಿತಿ ಮುಂದೆ ಮಂಡಿಸಲಾಗಿದ್ದು, ಮೇಲೆ ಕ್ರಮಾಂಕ (2) ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯಲ್ಲಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಮೆ:: ರೆನೊವೊ ಪವರ್ ಜೆನ್ ಪ್ರೈವೇಟ್ ಲಿಮಿಟೆಡ್ ಇವರಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಳಸೇಶ್ವರ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಪರಿಗಣಿಸಲಾಗಿದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ : –

**ಸರ್ಕಾರದ ಆದೇಶ ಸಂಖ್ಯೆ: ಇಎನ್ 331 ಎನ್‌ಸಿಇ 2007, ಬೆಂಗಳೂರು, ದಿನಾಂಕ: 25ನೇ ಜೂನ್ 2009**

ಮೆ:: ರೆನೊವೊ ಪವರ್ ಜೆನ್ ಪ್ರೈವೇಟ್ ಲಿಮಿಟೆಡ್‌ಗೆ ಚಿಕ್ಕಮಗಳೂರು ಜಿಲ್ಲೆಯ, ಮೂಡಿಗೆರೆ ತಾಲ್ಲೂಕು, ಕಳಸ ಗ್ರಾಮದ ಬಳಿ ಭದ್ರಾ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಳಸೇಶ್ವರ ಕಿರು ಜಲ ವಿದ್ಯುತ್ ಯೋಜನೆಯನ್ನು ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ:–

1(ಅ) ಸದರಿ ಯೋಜನೆಯಿಂದ ಕೆಳ ತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಇ) ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ರೂ. 25,000.00 ದಂತೆ ರೂ. 1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.

2(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ & ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3 ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4 ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5 ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6 ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7 ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್ / ನೀರಾವರಿ / ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

10. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.

11. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

12. ಡಿ.ಪಿ.ಆರ್. ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1626 **ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಮೆ:: ಎಲ್.ಕೆ. ಪವರ್ ಕಾರ್ಪೋರೇಷನ್ ಲಿಮಿಟೆಡ್ ಕಂಪನಿಗೆ ಹಂಚಿಕೆಯಾಗಿದ್ದು ರದ್ದಾಗಿರುವ 2.00 ಮೆ.ವ್ಯಾ. ಸಾಮರ್ಥ್ಯದ ದೇವರ ಬೆಳಕೆರೆ ಕಿರು ಜಲ ವಿದ್ಯುತ್ ಯೋಜನೆಯ ರದ್ಧತಿ ಆದೇಶವನ್ನು ಹಿಂಪಡೆಯುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ:ಪಿಡಬ್ಲ್ಯೂಡಿ 148 ಪಿಪಿಸಿ 89 (2), ದಿನಾಂಕ:14-03-1990.

2) ಸರ್ಕಾರಿ ಆದೇಶ ಸಂಖ್ಯೆ: ಇಂಇ 205 ಎನ್‌ಸಿಇ 2002, ದಿನಾಂಕ: 28.5.2004.

3) ಮೆ:: ಎಲ್.ಕೆ. ಪವರ್ ಕಾರ್ಪೋರೇಷನ್ ಲಿಮಿಟೆಡ್ ಕಂಪನಿಯವರ ಮನವಿ ದಿನಾಂಕ:8-4-2008 ಮತ್ತು 08-09-2008.

4) ಟಿಪ್ಪಣಿ ಸಂಖ್ಯೆ :ಇಎನ್ 144 ಎನ್‌ಸಿಇ 2008 (ಭಾಗ), ದಿನಾಂಕ:16-01-2009.

5) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಎಲ್‌ಕೆಪವರ್/09/817, ದಿನಾಂಕ: 9/11.2.2009

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ಮೆ:: ಎಲ್.ಕೆ. ಪವರ್ ಕಾರ್ಪೋರೇಷನ್ ಲಿಮಿಟೆಡ್ ಕಂಪನಿಗೆ ಈ ಕೆಳಗೆ ವಿವರಿಸಿರುವಂತೆ 2.00 ಮೆ.ವ್ಯಾ. ಸಾಮರ್ಥ್ಯದ ದೇವರ ಬೆಳಕೆರೆ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು :-

| ಕಿರು ಜಲ ವಿದ್ಯುತ್ ಯೋಜನೆ ಹೆಸರು | ಸರ್ಕಾರಿ ಆದೇಶ ಸಂಖ್ಯೆ ಮತ್ತು ದಿನಾಂಕ | ಯೋಜನೆಯ ಸ್ಥಳ | ಸಾಮರ್ಥ್ಯ (ಮೆಗಾ ವ್ಯಾಟ್‌ನಲ್ಲಿ) |
|---|---|---|---|
| ದೇವರ ಬೆಳಕೆರೆ | ಪಿಡಬ್ಲ್ಯುಡಿ 148 ಪಿಪಿಸಿ 89 (2) ದಿನಾಂಕ:14.3.1990 | ದಾವಣಗೆರೆ ಜಿಲ್ಲೆಯ ಹರಿಹರ ತಾಲ್ಲೂಕಿನ ದೇವರ ಬೆಳಕೆರೆ ಗ್ರಾಮದ ಲಕ್ಕವಳ್ಳಿ ಅಣೆಕಟ್ಟಿನ ಹಿನ್ನೀರಿನ ಶಾಂತಿಸಾಗರ ಬ್ಯಾರೇಜ್‌ಗೆ ಅಡ್ಡಲಾಗಿ | 2.00 |

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಆದೇಶದಲ್ಲಿ ಮೇಲ್ಕಂಡ ಕಿರು ಜಲ ವಿದ್ಯುತ್ ಯೋಜನೆ ಹಂಚಿಕೆಯಾಗಿ ಬಹಳ ವರ್ಷಗಳು ಕಳೆದಿದ್ದರೂ ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಅಭಿವೃದ್ಧಿದಾರರು ಪ್ರಗತಿ ಸಾಧಿಸಿರುವುದಿಲ್ಲವೆಂದು ಯೋಜನೆಯ ಹಂಚಿಕೆ ಆದೇಶವನ್ನು ರದ್ದು ಪಡಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿ ಮೆ:: ಎಲ್.ಕೆ. ಪವರ್ ಕಾರ್ಪೊರೇಷನ್ ಲಿಮಿಟೆಡ್ ಕಂಪನಿಯವರು ಸಲ್ಲಿಸಿದ ಮನವಿಗಳಲ್ಲಿ ಯೋಜನಾ ಹಂಚಿಕೆ ರದ್ಧತಿ ಆದೇಶವನ್ನು ಹಿಂದಕ್ಕೆ ಪಡೆದು ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ವಿಸ್ತರಿಸಬೇಕೆಂದು ಸರ್ಕಾರವನ್ನು ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಟಿಪ್ಪಣಿಯಲ್ಲಿ, ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತರವರಿಗೆ ಮೇಲ್ಕಂಡ ಯೋಜನಾ ಸ್ಥಳದ ಪರಿವೀಕ್ಷಣೆ ಮಾಡಿ, ಪರಿವೀಕ್ಷಣಾ ವರದಿಯನ್ನು ಸರ್ಕಾರಕ್ಕೆ ಕಳುಹಿಸುವಂತೆ ತಿಳಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (5) ರ ಪತ್ರದಲ್ಲಿ, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು, ಮೆ:: ಎಲ್.ಕೆ. ಪವರ್ ಕಾರ್ಪೊರೇಷನ್ ಲಿಮಿಟೆಡ್ ಕಂಪನಿಯ ದೇವರ ಬೆಳಕೆರೆ ಕಿರು ಜಲ ವಿದ್ಯುತ್ ಯೋಜನೆಯನ್ನು ಕ್ರೆಡಲ್ ನ ಡಿ.ಜಿ.ಎಂ. (ಹೈಡ್ರೊ) ರವರು ದಿನಾಂಕ : 2.2.2009 ಮತ್ತು 3.2.2009 ರಂದು ಸ್ಥಳ ಪರಿವೀಕ್ಷಣೆ ಮಾಡಿ ನೀಡಿರುವ ವರದಿಯು ಈ ಕೆಳಗಿನಂತಿದೆ :–

> **"ದೇವರಬೆಳಕೆರೆ:–** ದಾವಣಗೆರೆ ಜಿಲ್ಲೆಯಲ್ಲಿ ಸ್ಥಳ ಪರಿವೀಕ್ಷಣಾ ವರದಿಯ ಪ್ರಕಾರ, ಈ ಯೋಜನೆಯನ್ನು ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಹೆಚ್ಚಿನ ಕಾಮಗಾರಿಗಳು ನಡೆದಿರುತ್ತವೆ. In take structure, spill way, penstocks works ಶೇಕಡ 90ರಷ್ಟು ಮುಗಿದಿರುತ್ತದೆ. Power House work ಶೇಕಡ 50ರಷ್ಟು ಮುಗಿದಿರುತ್ತದೆ. 7.5 ಎಕರೆ ನೀರಾವರಿ ಜಮೀನು ಸಂಸ್ಥೆಗೆ ಗುತ್ತಿಗೆ ಆಧಾರದ ಮೇಲೆ ಈಗಾಗಲೇ ನೀಡಲಾಗಿದೆ."

ಯೋಜನಾ ಅನುಷ್ಠಾನಕ್ಕಾಗಿ ಸಂಸ್ಥೆಯು ರೂ.11,586,715/–ನ್ನು ವೆಚ್ಚ ಮಾಡಿರುತ್ತದೆ.

ಮೇಲ್ಕಂಡ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 379 ಎನ್‌ಸಿಇ 2009, ಬೆಂಗಳೂರು, ದಿನಾಂಕ: 25ನೇ ಜೂನ್ 2009**

ಮೆ:: ಎಲ್.ಕೆ. ಪವರ್ ಕಾರ್ಪೊರೇಷನ್ ಲಿಮಿಟೆಡ್ ಕಂಪನಿಗೆ ಸರ್ಕಾರಿ ಆದೇಶ ಸಂಖ್ಯೆ: ಇಂಇ 205 ಎನ್‌ಸಿಇ 2002 ದಿನಾಂಕ: 28.5.2004 ರಲ್ಲಿ ಈ ಕೆಳಗೆ ನಮೂದಿಸಿರುವ ಕಿರು ಜಲ ವಿದ್ಯುತ್ ಯೋಜನೆಯನ್ನು ರದ್ದು ಪಡಿಸಲಾಗಿರುವ ಆದೇಶವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಿಂದಕ್ಕೆ ಪಡೆದು, ಈ ಕೆಳಗಿನ ನಿಬಂಧನೆಗಳಿಗೊಳಪಟ್ಟು ಯೋಜನೆಯನ್ನು ಅನುಷ್ಠಾನ ಮಾಡಲು ಅನುಮತಿಸಿ ಆದೇಶವನ್ನು ಪೂರ್ವಸ್ಥಿತಿಗೆ ತರಲಾಗಿದೆ (Restored):–

| ಕಿರು ಜಲ ವಿದ್ಯುತ್ ಯೋಜನೆ ಹೆಸರು | ಯೋಜನೆಯ ಸ್ಥಳ | ಸಾಮರ್ಥ್ಯ (ಮೆಗಾ ವ್ಯಾಟ್‌ನಲ್ಲಿ) |
|---|---|---|
| ದೇವರ ಬೆಳಕೆರೆ | ದಾವಣಗೆರೆ ಜಿಲ್ಲೆಯ ಹರಿಹರ ತಾಲ್ಲೂಕಿನ ದೇವರ ಬೆಳಕೆರೆ ಗ್ರಾಮದ ಲಕ್ಕವಳ್ಳಿ ಅಣೆಕಟ್ಟಿನ ಹಿನ್ನೀರಿನ ಶಾಂತಿಸಾಗರ ಬ್ಯಾರೇಜ್‌ಗೆ ಅಡ್ಡಲಾಗಿ | 2.00 |

1(ಅ) ಸದರಿ ಯೋಜನೆಯಿಂದ ಕೆಳ ತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ರೂ.25,000.00 ದಂತೆ ರೂ. 1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು. ಈಗಾಗಲೇ ಪಾವತಿಸಿದ್ದಲ್ಲಿ, ಇದು ಅನ್ವಯವಾಗುವುದಿಲ್ಲ.

2(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ನೀರಾವರಿ ಇಲಾಖೆ, ಅರಣ್ಯ, ಜೀವಿಶಾಸ್ತ್ರ & ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್ ತುರ್ತಾಗಿ ಪಡೆಯತಕ್ಕದ್ದು.

3 ದೇವರ ಬೆಳಕೆರೆ ಯೋಜನೆಯನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ ಒಂದು ವರ್ಷದ ಒಳಗಾಗಿ ಅನುಷ್ಠಾನಗೊಳಿಸಿ ವಿದ್ಯುತ್ ಉತ್ಪಾದನೆ ಪ್ರಾರಂಭಿಸತಕ್ಕದ್ದು.

4 ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

5 ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

6 ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್ / ನೀರಾವರಿ / ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

7 ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

8\. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.

9\. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1627

**ಎಸ್.ಜಿ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಮೆ:: ಮನಲಿ ಶುಗರ್ಸ್ ಲಿಮಿಟೆಡ್‌ಗೆ **6.00** ಮೆಗಾ ವ್ಯಾಟ್ ಸಾಮರ್ಥ್ಯದ ಸಹ ವಿದ್ಯುತ್ ಯೋಜನೆಗೆ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:**
1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್ಇಡಿ/04/ಮನಲಿ/08/1807 ದಿನಾಂಕ:30.10.2008/ 4.11.2008.
2. ಸರ್ಕಾರಿ ಪತ್ರ ಸಂಖ್ಯೆ: ಇಎನ್ 382 ಎನ್‌ಸಿಇ 2008 ದಿನಾಂಕ: 15.12.2008.
3. ಕ್ರೆಡಲ್ ಪತ್ರ ಸಂಖ್ಯೆ: ಕೆಆರ್ಇಡಿ/04/ಮನಲಿ/09/229 ದಿನಾಂಕ: 17/28.1.2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ:: ಮನಲಿ ಶುಗರ್ಸ್ ಲಿಮಿಟೆಡ್‌ಗೆ ಬಿಜಾಪುರ ಜಿಲ್ಲೆಯ ಸಿಂಧಗಿ ತಾಲ್ಲೂಕಿನ ಮಲಘಾನ ಗ್ರಾಮದಲ್ಲಿ 6.00 MW (Gross) ಮತ್ತು 3.5 MW (exportable) ಸಾಮರ್ಥ್ಯದ ಸಹ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಸರ್ಕಾರದ ನಿರಾಕ್ಷೇಪಣೆಯನ್ನು ನೀಡುವಂತೆ ಸರ್ಕಾರಕ್ಕೆ ಶಿಫಾರಸು ಮಾಡಿ, ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಸರ್ಕಾರಿ ಪತ್ರದಲ್ಲಿ ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಲು ಕೆಲವೊಂದು ಪೂರಕ ದಾಖಲಾತಿಗಳನ್ನು ಒದಗಿಸುವಂತೆ ಕ್ರೆಡಲ್ ನ್ನು ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಪೂರಕ ದಾಖಲಾತಿಗಳನ್ನು ಒದಗಿಸಿರುತ್ತಾರೆ ಮತ್ತು ನಿರಕ್ಷೇಪಣ ಪತ್ರ ನೀಡಲು ಪರಿಗಣಿಸಬೇಕೆಂದು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 382 ಎನ್‌ಸಿಇ 2008, ಬೆಂಗಳೂರು, ದಿನಾಂಕ: 26ನೇ ಜೂನ್ 2009**

ಮೆ:: ಮನಲಿ ಶುಗರ್ಸ್ ಲಿಮಿಟೆಡ್‌ಗೆ ಬಿಜಾಪುರ ಜಿಲ್ಲೆಯ ಸಿಂಧಗಿ ತಾಲ್ಲೂಕಿನ ಮಲಘಾನ ಗ್ರಾಮದಲ್ಲಿ 6.00 MW (Gross) ಮತ್ತು 3.5 MW (exportable) ಸಾಮರ್ಥ್ಯದ ಸಹ ವಿದ್ಯುತ್ ಯೋಜನೆಯನ್ನು ಈ ಕೆಳಗಿನ ನಿಬಂಧನೆಗೊಳಪಟ್ಟು ಅನುಷ್ಠಾನ ಮಾಡಲು ಸರ್ಕಾರದ ಅಭ್ಯಂತರವಿರುವುದಿಲ್ಲ :–

1. The company shall obtain separate clearance from Karnataka Power Transmission Corporation Limited in respect of evacuation of power.
2. The company shall enter into wheeling and banking agreement with Karnataka Power Transmission Corporation Limited in case of selling power to third party and power purchase agreement in case of selling power to Karnataka Power Transmission Corporation Limited.
3. The company shall obtain necessary statutory clearance wherever required from the respective Departments / Organizations such as Forest Department, Revenue Department, & Karnataka State Pollution Control Board, etc. for both the Sugar Mill and the Power plant.
4. The Detailed Project Report (D.P.R.) for the power plant shall be got approved by Karnataka Renewable Energy Development Limited, before the commencement of the power plant.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1628

**ಎಸ್.ಜಿ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಮೆ:: ಎಲ್.ಕೆ. ಪವರ್ ಕಾರ್ಪೊರೇಷನ್ ಲಿಮಿಟೆಡ್ ಕಂಪನಿಗೆ ಹಂಚಿಕೆಯಾಗಿದ್ದು ರದ್ದಾಗಿರುವ 2.00 ಮೆ.ವ್ಯಾ. ಸಾಮರ್ಥ್ಯದ ಮದ್ದೂರು ಕಿರು ಜಲ ವಿದ್ಯುತ್ ಯೋಜನೆಯ ರದ್ಧತಿ ಆದೇಶವನ್ನು ಹಿಂಪಡೆಯುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ:ಪಿಡಬ್ಲ್ಯೂಡಿ 148 ಪಿಪಿಸಿ 89 (2), ದಿನಾಂಕ:14–03–1990.
2) ಸರ್ಕಾರಿ ಆದೇಶ ಸಂಖ್ಯೆ: ಇಂಇ 205 ಎನ್‌ಸಿಇ 2002, ದಿನಾಂಕ: 28.5.2004.
3) ಮೆ:: ಎಲ್.ಕೆ. ಪವರ್ ಕಾರ್ಪೊರೇಷನ್ ಲಿಮಿಟೆಡ್ ಕಂಪನಿಯವರ ಮನವಿ ದಿನಾಂಕ:8–4–2008 ಮತ್ತು 08–09–2008.
4) ಟಿಪ್ಪಣಿ ಸಂಖ್ಯೆ :ಇಎನ್ 144 ಎನ್‌ಸಿಇ 2008 (ಭಾಗ), ದಿನಾಂಕ :16–01–2009.
5) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಎಲ್‌ಕೆಪವರ್/09/817, ದಿನಾಂಕ: 9/11.2.2009

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ಮೆ:: ಎಲ್.ಕೆ. ಪವರ್ ಕಾರ್ಪೊರೇಷನ್ ಲಿಮಿಟೆಡ್ ಕಂಪನಿಗೆ ಈ ಕೆಳಗೆ ವಿವರಿಸಿರುವಂತೆ 2.00 ಮೆ.ವ್ಯಾ. ಸಾಮರ್ಥ್ಯದ ದೇವರ ಬೆಳಕೆರೆ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು :–

| ಕಿರು ಜಲ ವಿದ್ಯುತ್ ಯೋಜನೆ ಹೆಸರು | ಸರ್ಕಾರಿ ಆದೇಶ ಸಂಖ್ಯೆ ಮತ್ತು ದಿನಾಂಕ | ಯೋಜನೆಯ ಸ್ಥಳ | ಸಾಮರ್ಥ್ಯ (ಮೆಗಾ ವ್ಯಾಟ್‌ನಲ್ಲಿ) |
|---|---|---|---|
| ಮದ್ದೂರು | ಪಿಡಬ್ಲ್ಯುಡಿ 148 ಪಿಪಿಸಿ 89 (2) ದಿನಾಂಕ: 14.3.1990 | ಮಂಡ್ಯ ಜಿಲ್ಲೆಯ ಮಂಡ್ಯ ತಾಲ್ಲೂಕಿನ ಹುಲಿವನ ಗ್ರಾಮದ ಮದ್ದೂರು ಬ್ರ್ಯಾಂಚ್ ಕೆನಾಲ್‌ನ ವಿಶ್ವೇಶ್ವರಯ್ಯ ಕಾಲುವೆಗೆ ಅಡ್ಡಲಾಗಿ | 2.00 |

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಆದೇಶದಲ್ಲಿ ಮೇಲ್ಕಂಡ ಕಿರು ಜಲ ವಿದ್ಯುತ್ ಯೋಜನೆ ಹಂಚಿಕೆಯಾಗಿ ಬಹಳ ವರ್ಷಗಳು ಕಳೆದಿದ್ದರೂ ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಅಭಿವೃದ್ಧಿದಾರರು ಪ್ರಗತಿ ಸಾಧಿಸಿರುವುದಿಲ್ಲವೆಂದು ಯೋಜನೆಯ ಹಂಚಿಕೆ ಆದೇಶವನ್ನು ರದ್ದು ಪಡಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿ ಮೆ:: ಎಲ್.ಕೆ. ಪವರ್ ಕಾರ್ಪೊರೇಷನ್ ಲಿಮಿಟೆಡ್ ಕಂಪನಿಯವರು ಸಲ್ಲಿಸಿದ ಮನವಿಗಳಲ್ಲಿ ಯೋಜನಾ ಹಂಚಿಕೆ ರದ್ಧತಿ ಆದೇಶವನ್ನು ಹಿಂದಕ್ಕೆ ಪಡೆದು ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ವಿಸ್ತರಿಸಬೇಕೆಂದು ಸರ್ಕಾರವನ್ನು ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಟಿಪ್ಪಣಿಯಲ್ಲಿ, ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತರವರಿಗೆ ಮೇಲ್ಕಂಡ ಯೋಜನಾ ಸ್ಥಳದ ಪರಿವೀಕ್ಷಣೆ ಮಾಡಿ, ಪರಿವೀಕ್ಷಣಾ ವರದಿಯನ್ನು ಸರ್ಕಾರಕ್ಕೆ ಕಳುಹಿಸುವಂತೆ ತಿಳಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (5) ರ ಪತ್ರದಲ್ಲಿ, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು, ಮೆ:: ಎಲ್.ಕೆ. ಪವರ್ ಕಾರ್ಪೊರೇಷನ್ ಲಿಮಿಟೆಡ್ ಕಂಪನಿಯ ಮದ್ದೂರು ಕಿರು ಜಲ ವಿದ್ಯುತ್ ಯೋಜನೆಯನ್ನು ಕ್ರೆಡಲ್ ನ ಡಿ.ಜಿ.ಎಂ. (ಹೈಡ್ರೊ) ರವರು ದಿನಾಂಕ : 2.2.2009 ಮತ್ತು 3.2.2009 ರಂದು ಸ್ಥಳ ಪರಿವೀಕ್ಷಣೆ ಮಾಡಿ ನೀಡಿರುವ ವರದಿಯು ಈ ಕೆಳಗಿನಂತಿದೆ :–

"**ಮದ್ದೂರು ಬ್ರ್ಯಾಂಚ್ ಕೆನಾಲ್:–** Intake structure works are 90% completed. Penstock erected. Power house works also 90% completed. Two turbines are yet to be installed in the power house. Switch yard work 50% completed. 4.5 acres of land purchased from private land owners ಎಂದು ತಿಳಿಸಲಾಗಿದೆ."

ಯೋಜನಾ ಅನುಷ್ಠಾನದ ನಿಟ್ಟಿನಲ್ಲಿ ಸಂಸ್ಥೆಯು ಹೆಚ್ಚಿನ ಕ್ರಮ ವಹಿಸಿರುವುದು ಸ್ಥಳ ಪರಿವೀಕ್ಷಣಾ ವರದಿ ಹಾಗೂ ದಾಖಲಾತಿಗಳಿಂದ ತಿಳಿದು ಬರುತ್ತದೆ. ಸಂಸ್ಥೆಯು ರೂ.35,459,785/– ಗಳನ್ನು ಯೋಜನಾ ಅನುಷ್ಠಾನಕ್ಕಾಗಿ ವೆಚ್ಚ ಮಾಡಿರುತ್ತದೆ.

ಮೇಲ್ಕಂಡ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 144 ಎನ್‌ಸಿಇ 2008, ಬೆಂಗಳೂರು, ದಿನಾಂಕ: 25ನೇ ಜೂನ್ 2009**

ಮೆ:: ಎಲ್.ಕೆ. ಪವರ್ ಕಾರ್ಪೊರೇಷನ್ ಲಿಮಿಟೆಡ್ ಕಂಪನಿಗೆ ಸರ್ಕಾರಿ ಆದೇಶ ಸಂಖ್ಯೆ: ಇಂಇ 205 ಎನ್‌ಸಿಇ 2002 ದಿನಾಂಕ: 28.5.2004 ರಲ್ಲಿ ಈ ಕೆಳಗೆ ನಮೂದಿಸಿರುವ ಕಿರು ಜಲ ವಿದ್ಯುತ್ ಯೋಜನೆಯನ್ನು ರದ್ದು ಪಡಿಸಲಾಗಿರುವ ಆದೇಶವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಿಂದಕ್ಕೆ ಪಡೆದು, ಈ ಕೆಳಗಿನ ನಿಬಂಧನೆಗಳಿಗೊಳಪಟ್ಟು ಯೋಜನೆಯನ್ನು ಅನುಷ್ಠಾನ ಮಾಡಲು ಅನುಮತಿಸಿ ಆದೇಶವನ್ನು ಪೂರ್ವಸ್ಥಿತಿಗೆ ತರಲಾಗಿದೆ (Restored):–

| ಕಿರು ಜಲ ವಿದ್ಯುತ್ ಯೋಜನೆ ಹೆಸರು | ಯೋಜನೆಯ ಸ್ಥಳ | ಸಾಮರ್ಥ್ಯ (ಮೆಗಾ ವ್ಯಾಟ್‌ನಲ್ಲಿ) |
|---|---|---|
| ಮದ್ದೂರು | ಮಂಡ್ಯ ಜಿಲ್ಲೆಯ ಮಂಡ್ಯ ತಾಲ್ಲೂಕಿನ ಹುಲಿವನ ಗ್ರಾಮದ ಮದ್ದೂರು ಬ್ರ್ಯಾಂಚ್ ಕೆನಾಲ್‌ನ ವಿಶ್ವೇಶ್ವರಯ್ಯ ಕಾಲುವೆಗೆ ಅಡ್ಡಲಾಗಿ | 2.00 |

1(ಅ) ಸದರಿ ಯೋಜನೆಯಿಂದ ಕೆಳ ತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ರೂ. 25,000.00 ದಂತೆ ರೂ. 1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು. ಈಗಾಗಲೇ ಪಾವತಿಸಿದ್ದಲ್ಲಿ, ಇದು ಅನ್ವಯವಾಗುವುದಿಲ್ಲ.

2(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ನೀರಾವರಿ ಇಲಾಖೆ, ಅರಣ್ಯ, ಜೀವಿಶಾಸ್ತ್ರ & ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್ ತುರ್ತಾಗಿ ಪಡೆಯತಕ್ಕದ್ದು.

3. ಮದ್ದೂರು ಯೋಜನೆಯನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ ಒಂದು ವರ್ಷದ ಒಳಗಾಗಿ ಅನುಷ್ಠಾನಗೊಳಿಸಿ ವಿದ್ಯುತ್ ಉತ್ಪಾದನೆ ಪ್ರಾರಂಭಿಸತಕ್ಕದ್ದು.

4. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

5. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

6. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್ / ನೀರಾವರಿ / ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.
7. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.
8. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.
9. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1629

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಮೆ:: ಜೆ.ಹೆಚ್. ಪಟೇಲ್ ಎನರ್ಜಿ (ಕರ್ನಾಟಕ) ಪ್ರೈವೇಟ್ ಲಿಮಿಟೆಡ್ ಇವರಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಸೋಮನದಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್ಇಡಿ/06/ಸೋಮನದಿ/2007/1887 ದಿನಾಂಕ:25.7.20007/ 24.8.2007.

2. ದಿನಾಂಕ: 13.2.2009 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ:: ಜೆ.ಹೆಚ್. ಪಟೇಲ್ ಎನರ್ಜಿ (ಕರ್ನಾಟಕ) ಪ್ರೈವೇಟ್ ಲಿಮಿಟೆಡ್ ಇವರಿಗೆ ಉತ್ತರ ಕನ್ನಡ ಜಿಲ್ಲೆಯ ಸಿದ್ದಾಪುರ ತಾಲ್ಲೂಕಿನ (ಸಿದ್ದಾಪುರ ಪಟ್ಟಣದಿಂದ 17 ಕಿ.ಮೀ.) ಹುಲ್ಕುಟಿ ಗ್ರಾಮದ ಬಳಿ ಸೋಮ (ಅಘನಾಶಿನಿ ನದಿ ಮತ್ತು ತದ್ರಿ ನದಿಯ ಉಪ ನದಿ) ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಸೋಮನದಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ದಿನಾಂಕ: 13.2.2009 ರಂದು ನಡೆದ ಹಂಚಿಕೆ ಸಮಿತಿ ಮುಂದೆ ಮಂಡಿಸಲಾಗಿದ್ದು, ಮೇಲೆ ಕ್ರಮಾಂಕ (2) ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯಲ್ಲಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಮೆ:: ಜೆ.ಹೆಚ್. ಪಟೇಲ್ ಎನರ್ಜಿ (ಕರ್ನಾಟಕ) ಪ್ರೈವೇಟ್ ಲಿಮಿಟೆಡ್ ಕಂಪನಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಸೋಮನದಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಪರಿಗಣಿಸಲಾಗಿದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 292 ಎನ್‌ಸಿಇ 2007, ಬೆಂಗಳೂರು, ದಿನಾಂಕ: 25ನೇ ಜೂನ್ 2009**

ಮೆ:: ಜೆ.ಹೆಚ್. ಪಟೇಲ್ ಎನರ್ಜಿ (ಕರ್ನಾಟಕ) ಪ್ರೈವೇಟ್ ಲಿಮಿಟೆಡ್ ಇವರಿಗೆ ಉತ್ತರ ಕನ್ನಡ ಜಿಲ್ಲೆಯ ಸಿದ್ದಾಪುರ ತಾಲ್ಲೂಕಿನ (ಸಿದ್ದಾಪುರ ಪಟ್ಟಣದಿಂದ 17 ಕಿ.ಮೀ.) ಹುಲ್ಕುಟಿ, ಹಂಪೇರಿ, ಚಿತಲಮನೆ ಮತ್ತು ಮಣಿಹೊಳೆ ಗ್ರಾಮದ ಬಳಿ ಸೋಮ (ಅಘನಾಶಿನಿ ನದಿ ಮತ್ತು ತದ್ರಿ ನದಿಯ ಉಪ ನದಿ) ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಸೋಮನದಿ ಕಿರು ಜಲ ವಿದ್ಯುತ್ ಯೋಜನೆಯನ್ನು ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ:–

1(ಅ) ಸದರಿ ಯೋಜನೆಯಿಂದ ಕೆಳ ತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಇ) ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು. **ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಅಭಿವೃದ್ಧಿದಾರರ ಒಡಂಬಡಿಕೆಯನ್ನು ಸರ್ಕಾರಕ್ಕೆ ಕಳುಹಿಸುವ ಮುನ್ನ documentation networth ಇತ್ಯಾದಿಗಳನ್ನು ಪೂರೈಸಿಕೊಂಡಿರತಕ್ಕದ್ದು.**

(ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ರೂ. 25,000.00 ದಂತೆ ರೂ. 1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.

2(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ & ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3 ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4 ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5 ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6 ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7 ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್ / ನೀರಾವರಿ / ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

10. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.

11. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

12. ಡಿ.ಪಿ.ಆರ್. ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1630 **ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಮೆ:: ಜೆ.ಹೆಚ್. ಪಟೇಲ್ ಎನರ್ಜಿ (ಕರ್ನಾಟಕ) ಪ್ರೈವೇಟ್ ಲಿಮಿಟೆಡ್ ಇವರಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ತದ್ರಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ತದ್ರಿ/2007/1936 ದಿನಾಂಕ: 23/30.8.2007.

2. ದಿನಾಂಕ: 13.2.2009 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ:: ಜೆ.ಹೆಚ್. ಪಟೇಲ್ ಎನರ್ಜಿ (ಕರ್ನಾಟಕ) ಪ್ರೈವೇಟ್ ಲಿಮಿಟೆಡ್ ಇವರಿಗೆ ಉತ್ತರ ಕನ್ನಡ ಜಿಲ್ಲೆಯ ಸಿದ್ದಾಪುರ ತಾಲ್ಲೂಕಿನ ಬಳಿ (ಸಿದ್ದಾಪುರ ಪಟ್ಟಣದಿಂದ 17 ಕಿ.ಮೀ.) ಸೋಮಾ ನದಿಗೆ (ಅಘನಾಶಿನಿ ನದಿ ಮತ್ತು

ತದ್ರಿ ನದಿಯ ಉಪ ನದಿ) ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ತದ್ರಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ದಿನಾಂಕ: 13.2.2009 ರಂದು ನಡೆದ ಹಂಚಿಕೆ ಸಮಿತಿ ಮುಂದೆ ಮಂಡಿಸಲಾಗಿದ್ದು, ಮೇಲೆ ಕ್ರಮಾಂಕ (2) ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯಲ್ಲಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಮೆ:: ಜೆ.ಹೆಚ್. ಪಟೇಲ್ ಎನರ್ಜಿ (ಕರ್ನಾಟಕ) ಪ್ರೈವೇಟ್ ಲಿಮಿಟೆಡ್ ಕಂಪನಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ತದ್ರಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಪರಿಗಣಿಸಲಾಗಿದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ : –

**ಸರ್ಕಾರದ ಆದೇಶ ಸಂಖ್ಯೆ: ಇಎನ್ 303 ಎನ್‌ಸಿಇ 2007, ಬೆಂಗಳೂರು, ದಿನಾಂಕ: 25ನೇ ಜೂನ್ 2009.**

ಮೆ:: ಜೆ.ಹೆಚ್. ಪಟೇಲ್ ಎನರ್ಜಿ (ಕರ್ನಾಟಕ) ಪ್ರೈವೇಟ್ ಲಿಮಿಟೆಡ್ ಇವರಿಗೆ ಉತ್ತರ ಕನ್ನಡ ಜಿಲ್ಲೆಯ ಸಿದ್ದಾಪುರ ತಾಲ್ಲೂಕಿನ ದನಕಲ್/ಹುಲಿಮನೆ ಗ್ರಾಮದ (ಸಿದ್ದಾಪುರ ಪಟ್ಟಣದಿಂದ 17 ಕಿ.ಮೀ.) ಬಳಿ ಸೋಮಾ ನದಿಗೆ (ಅಘನಾಶಿನಿ ನದಿ ಮತ್ತು ತದ್ರಿ ನದಿಯ ಉಪ ನದಿ) ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ತದ್ರಿ ಕಿರು ಜಲ ವಿದ್ಯುತ್ ಯೋಜನೆಯನ್ನು ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ:–

1(ಅ) ಸದರಿ ಯೋಜನೆಯಿಂದ ಕೆಳ ತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಇ) ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು. **ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಅಭಿವೃದ್ಧಿದಾರರ ಒಡಂಬಡಿಕೆಯನ್ನು ಸರ್ಕಾರಕ್ಕೆ ಕಳುಹಿಸುವ ಮುನ್ನ documentation networth ಇತ್ಯಾದಿಗಳನ್ನು ಪೂರೈಸಿಕೊಂಡಿರತಕ್ಕದ್ದು.**

(ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ರೂ. 25,000.00 ದಂತೆ ರೂ. 1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.

2(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ & ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3 ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4 ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5 ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6 ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7 ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

8 ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್ / ನೀರಾವರಿ / ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

9 ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

10 ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.

11 ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

12 ಡಿ.ಪಿ.ಆರ್. ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1631 **ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಮೆ:: ಜೆ.ಹೆಚ್. ಪಟೇಲ್ ಎನರ್ಜಿ (ಕರ್ನಾಟಕ) ಪ್ರೈವೇಟ್ ಲಿಮಿಟೆಡ್ ಇವರಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ದೇವಿಗಡ್ಡಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ದೇವಿಗಡ್ಡಿ/2007/1987 ದಿನಾಂಕ:25.7.2007/ 5.9.2007.
2. ದಿನಾಂಕ: 13.2.2009 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ:: ಜೆ.ಹೆಚ್. ಪಟೇಲ್ ಎನರ್ಜಿ (ಕರ್ನಾಟಕ) ಪ್ರೈವೇಟ್ ಲಿಮಿಟೆಡ್ ಇವರಿಗೆ ಉತ್ತರ ಕನ್ನಡ ಜಿಲ್ಲೆಯ ಯಲ್ಲಾಪುರ ತಾಲ್ಲೂಕಿನ ದೇವಿಗಡ್ಡಿ ಗ್ರಾಮದ ಬಳಿ ಬೆಡ್ತಿ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ದೇವಿಗಡ್ಡಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ದಿನಾಂಕ: 13.2.2009 ರಂದು ನಡೆದ ಹಂಚಿಕೆ ಸಮಿತಿ ಮುಂದೆ ಮಂಡಿಸಲಾಗಿದ್ದು, ಮೇಲೆ ಕ್ರಮಾಂಕ (2) ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯಲ್ಲಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಮೆ:: ಜೆ.ಹೆಚ್. ಪಟೇಲ್ ಎನರ್ಜಿ (ಕರ್ನಾಟಕ) ಪ್ರೈವೇಟ್ ಲಿಮಿಟೆಡ್ ಇವರಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ದೇವಿಗಡ್ಡಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಪರಿಗಣಿಸಲಾಗಿದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 320 ಎನ್‌ಸಿಇ 2007, ಬೆಂಗಳೂರು, ದಿನಾಂಕ: 25ನೇ ಜೂನ್ 2009**

ಮೆ:: ಜೆ.ಹೆಚ್. ಪಟೇಲ್ ಎನರ್ಜಿ (ಕರ್ನಾಟಕ) ಪ್ರೈವೇಟ್ ಲಿಮಿಟೆಡ್ ಇವರಿಗೆ ಉತ್ತರ ಕನ್ನಡ ಜಿಲ್ಲೆಯ ಯಲ್ಲಾಪುರ ತಾಲ್ಲೂಕಿನ ದೇವಿಗಡ್ಡಿ ಗ್ರಾಮದ ಬಳಿ ಬೆಡ್ತಿ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ದೇವಿಗಡ್ಡಿ ಕಿರು ಜಲ ವಿದ್ಯುತ್ ಯೋಜನೆಯನ್ನು ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ:–

1(ಅ) ಸದರಿ ಯೋಜನೆಯಿಂದ ಕೆಳ ತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಇ) ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ರೂ. 25,000.00 ದಂತೆ ರೂ. 1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.

2(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ & ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3 ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4 ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5 ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6 ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7 ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

8 ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್ / ನೀರಾವರಿ / ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

9 ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

10 ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.

11 ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

12 ಡಿ.ಪಿ.ಆರ್. ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1632

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಭೀಮಪ್ಪ ಯಮನಪ್ಪ ಬೆಳ್ಳುಬ್ಬಿ, ಡಿವೈ.ಎಸ್.ಪಿ, ಬಸವನಬಾಗೇವಾಡಿ ಪೊಲೀಸ್ ಠಾಣೆ, ವಿಜಾಪುರ ರವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣದ ಅಭಿಯೋಜನಾ ಮಂಜೂರಾತಿ – ಪರಿಷ್ಕೃತ ಆದೇಶ.

**ಓದಲಾಗಿದೆ:** 1) ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ/ಐಎನ್‌ವಿ(ಜಿ)ಎಲ್:43:ಸಿಆರ್–8/2007–08 ದಿನಾಂಕ 29–08–2008.

2) ಸರ್ಕಾರದ ಆದೇಶ ಸಂಖ್ಯೆ: ಒಇ 410 ಪೊಸಿಪ 2007 ದಿ:20.2.2009

3) ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ/ಐಎನ್‌ವಿ(ಜಿ)ಎಲ್:43:ಸಿಆರ್–8/2007–08 ದಿನಾಂಕ 13.3.2009.

**ಪ್ರಸ್ತಾವನೆ:**

ಮೇಲೆ (2) ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಭೀಮಪ್ಪ ಯಮನಪ್ಪ ಬೆಳ್ಳುಬ್ಬಿ, ಡಿವೈ.ಎಸ್.ಪಿ, ಬಸವನಬಾಗೇವಾಡಿ ಪೊಲೀಸ್ ಠಾಣೆ, ವಿಜಾಪುರ ರವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣದಲ್ಲಿ ಸರ್ಕಾರದ ಅಭಿಯೋಜನಾ ಮಂಜೂರಾತಿಯನ್ನು ನೀಡಿ ಆದೇಶಿಸಲಾಗಿತ್ತು. ಮೇಲೆ ಓದಲಾದ (3) ರಲ್ಲಿನ ಪತ್ರದಲ್ಲಿ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಸದರಿ ಆದೇಶದಲ್ಲಿ ಕೆಲವು ಬೆರಳಚ್ಚಿನ ನ್ಯೂನತೆಗಳಿರುವುದರಿಂದ ಪರಿಷ್ಕೃತ ಅಭಿಯೋಜನಾ ಮಂಜೂರಾತಿಯ ಆದೇಶವನ್ನು ನೀಡಲು ಕೋರಿರುತ್ತಾರೆ. ಸರ್ಕಾರವು ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರದ ಆದೇಶ ಸಂಖ್ಯೆ:ಒಇ 410 ಪೊಸಿಪ 2007 ದಿನಾಂಕ 20.02.2009 ರಲ್ಲಿ ನೀಡಿದ್ದ ಅಭಿಯೋಜನಾ ಮಂಜೂರಾತಿಯ ಆದೇಶವನ್ನು ಹಿಂದಕ್ಕೆ ಪಡೆದು ಪರಿಷ್ಕೃತ ಮಂಜೂರಾತಿ ಆದೇಶವನ್ನು ಹೊರಡಿಸಲು ತೀರ್ಮಾನಿಸಿದೆ. ಅದರಂತೆ ಪರಿಷ್ಕೃತ ಅಭಿಯೋಜನಾ ಮಂಜೂರಾತಿ ಆದೇಶವನ್ನು ಈ ಮೂಲಕ ಹೊರಡಿಸಲಾಗಿದೆ.

ಶ್ರೀ ಭೀಮಪ್ಪ ಯಮನಪ್ಪ ಬೆಳ್ಳುಬ್ಬಿ, ಡಿವೈ.ಎಸ್.ಪಿ. ಬಸವನಬಾಗೇವಾಡಿ ಪೊಲೀಸ್ ಠಾಣೆ, ವಿಜಾಪುರ ಇವರ ವಿರುದ್ಧ ಗುನ್ನೆ ಸಂಖ್ಯೆ:8/07 ರಲ್ಲಿ ಆರಕ್ಷಕ ನಿರೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ವಿಜಾಪುರ ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿ ಮತ್ತು ತನಿಖಾ ದಾಖಲಾತಿಗಳನ್ನು ಮಾನ್ಯ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಪೊಲೀಸ್ ವಿಭಾಗ ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ ಪತ್ರ ದಿನಾಂಕ 29–08–2008 ರೊಡನೆ ಕಳುಹಿಸುತ್ತಾ ಆಪಾದಿತರನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ, 1988ರ 19(1)(ಸಿ) ಕಲಂನ ಅಡಿಯಲ್ಲಿ ಮಂಜೂರಾತಿಗಾಗಿ ಸರ್ಕಾರವನ್ನು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರಿಯಾದ ಸರ್ಕಾರವು, ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ ಪತ್ರ ಸಂಖ್ಯೆ:ಲೋಕ್:ಐಎನ್‌ವಿ(ಜಿ):ಎಲ್:43:ಸಿಆರ್–8/2007–08 ದಿನಾಂಕ:29.08.2008 ರೊಂದಿಗೆ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ.

1) ಶ್ರೀ ಮಹದೇವಪ್ಪ ಕೆಂಚಪ್ಪ ಹಿರೇಕುರುಬರ ಸಾ:ಕಣಕಾಲ, ಬಸವನಬಾಗೇವಾಡಿ
2) ಪ್ರಥಮ ವರ್ತಮಾನ ವರದಿ, ಬಸವನಬಾಗೇವಾಡಿ, ಲೋಕಾಯುಕ್ತ ಪೊಲೀಸ್ ಠಾಣೆ ಪ್ರಕರಣದ ಸಂಖ್ಯೆ:8/07.
3) ಪ್ರಾಯೋಗಿಕ ಪಂಚನಾಮೆ ದಿನಾಂಕ 25–10–2007.
4) ಟ್ರ್ಯಾಪ್‌ನ ಮಹಜರ್ ದಿನಾಂಕ 25–10–2007.
5) ರಾಸಾಯನಿಕ ಪರೀಕ್ಷಕರ ಪರೀಕ್ಷಣಾ ವರದಿ ಸಂಖ್ಯೆ:6(ಎ) ದಿನಾಂಕ 26–11–2007.
6) ಕೃತ್ಯ ನಡೆದ ಸ್ಥಳದ ನಕಾಶೆ
7) ಸಾಕ್ಷಿಗಳ ಹೇಳಿಕೆಗಳು:
    1) ಮಹಾದೇವಪ್ಪ ಕೆಂಚಪ್ಪ ಹಿರೇಕುರುಬರ ಸಾ:ಕಣಕಾಲ (ಫಿರ್ಯಾದಿ)
    2) ರಮೇಶ ಚಿದಾನಂದ ನಳಬಂದ ಪ್ರ.ದ.ಸ. (ಪಂಚ ನಂ.1)
    3) ಬಾಲಾಜಿ ಶ್ರೀನಿವಾಸ ಕುಲಕರ್ಣಿ, ಪ್ರ.ದ.ಸ. (ಪಂಚ ನಂ.2)
    4) ಎಮ್.ಸಿ.ನಾಯಕ, ದ್ವಿ.ದ.ಸ. ತಾಲ್ಲೂಕ್ ಪಂಚಾಯತ್ ಬಿಜಾಪುರ.
    5) ಕಾಂತು @ ಕಾಂತಪ್ಪ ಸಿದ್ರಾಮಪ್ಪ ಹೊಸಮನಿ ಸಾ:ಉತ್ನಾಳ
    6) ಸಿದ್ಧವ್ವ ಗಂ.ಸುಬ್ಬಣ್ಣಾ ವಾಲೀಕಾರ ಸಾ:ಕಣಕಾಲ
    7) ಸಂಗಪ್ಪ ಮುದಕಪ್ಪ ಹಾಲಿಹಾಳ ಸಾ:ಕಣಕಾಲ

8) ಶಾಂತವ್ವ ಸಿದ್ಧಪ್ಪ ವಾಲೀಕಾರಿ ಸಾ:ಕಣಕಾಲ
9) ಭೀಮಾಬಾಯಿ ಗಂ.ಸಂಗಪ್ಪ ಹಾಲಿಹಾಳ ಸಾ:ಕಣಕಾಲ
10) ಸಿದ್ಧಪ್ಪ ಸುಬ್ಬಣ್ಣಾ ವಾಲೀಕಾರ ಸಾ:ಕಣಕಾಲ
11) ಹಣಮಂತ ಸುಬ್ಬಣ್ಣಾ ವಾಲೀಕಾರ ಸಾ:ಕಣಕಾಲ
12) ಮಲ್ಲಪ್ಪ ಮುದಕಪ್ಪ ಹಾಲಿಹಾಳ ಸಾ:ಕಣಕಾಲ
13) ಕರಿಯಪ್ಪ ಸಿದ್ಧಪ್ಪ ವಾಲೀಕಾರ ಸಾ:ಕಣಕಾಲ
14) ಡಿ.ಸಂತೋಷಕುಮಾರ, ಪಿ.ಎಸ್.ಐ, ಬಸವನಬಾಗೇವಾಡಿ
15) ಕಾಡಯ್ಯ ಚಿದಾನಂದಯ್ಯ ಸ್ಥಾವರಮಠ, ಸಿ.ಎಸ್.ಸಿ, ಡಿ.ಎಸ್.ಪಿ ಆಫೀಸ್ ಬಸವನಬಾಗೇವಾಡಿ.
16) ಭೀಮಣ್ಣ ಬಸವಲಿಂಗಪ್ಪ ಚಿಗರಿ, ಸಿ.ಪಿ.ಸಿ, ಬಸವನಬಾಗೇವಾಡಿ ಪೊಲೀಸ್ ಠಾಣೆ
17) ಶೋಭಾ ಯಮನಪ್ಪ ಹರಿಜನ, ಡಬ್ಲ್ಯೂಪಿಸಿ, ಬಸವನಬಾಗೇವಾಡಿ ಪೊಲೀಸ್ ಠಾಣೆ
18) ಡಿ.ಆರ್.ಪಾಟೀಲ, ಎ.ಇ, ಲೋಕೋಪಯೋಗಿ ಇಲಾಖೆ, ಬಸವನಬಾಗೇವಾಡಿ
19) ಎಚ್.ಎಸ್.ಸೋಲಾಪುರ, ಸಿ.ಎಚ್.ಸಿ, ಕರ್ನಾಟಕ ಲೋಕಾಯುಕ್ತ, ಬಾಗಲಕೋಟೆ.
20) ಬಿ.ಎಂ.ಅಂಕುಲಿ, ಸಿ.ಎಚ್.ಸಿ, ಕರ್ನಾಟಕ ಲೋಕಾಯುಕ್ತ, ಬಾಗಲಕೋಟೆ.
21) ಐ.ಎಂ.ದುಂಡಸಿ, ಸಿಪಿಸಿ, ಕರ್ನಾಟಕ ಲೋಕಾಯುಕ್ತ, ಬಾಗಲಕೋಟೆ.
22) ಜಿ.ಎ.ಹಡಪದ, ಸಿಪಿಸಿ, ವಿಜಾಪುರ.
23) ಎಸ್.ಎಮ್.ಅಕಳವಾಡಿ, ಎ.ಪಿ.ಸಿ, ಕರ್ನಾಟಕ ಲೋಕಾಯುಕ್ತ, ಬಾಗಲಕೋಟೆ.

8) ಲಂಚ ಕೇಳಲು ಆಧಾರವಾದ ಕಡತ ಅಥವಾ ದಾಖಲೆಗಳ ಸಂಖ್ಯೆ:27 ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ:152/07.

ತನಿಖಾಧಿಕಾರಿಗಳಾದ ಶ್ರೀ ಎಸ್.ಎಫ್.ಕಂಬಾರ, ಡಿವೈ.ಎಸ್.ಪಿ, ಕರ್ನಾಟಕ ಲೋಕಾಯುಕ್ತ, ಬಾಗಲಕೋಟೆ ಇವರು ಶ್ರೀ ಬಿ.ವೈ.ಬೆಳ್ಳುಬ್ಬಿ, ಡಿವೈ.ಎಸ್.ಪಿ ರವರ ವಿರುದ್ಧ ದಂಡಾರ್ಹ ಪ್ರಕರಣವನ್ನು 8/07,ಕರ್ನಾಟಕ ಲೋಕಾಯುಕ್ತ ಬಸವನಬಾಗೇವಾಡಿ ಪೊಲೀಸ್ ಠಾಣೆ ಗುನ್ನೆ ಸಂಖ್ಯೆ:8/07ರಲ್ಲಿ ಲಂಚ ನಿರೋಧಕ ಕಾಯಿದೆ 1988ರ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ 13(2)ರ ಅಡಿಯಲ್ಲಿ ದಾಖಲಿಸಿಕೊಂಡಿರುತ್ತಾರೆ.

ಆಪಾದಿತರಾದ ಶ್ರೀ ಬಿ.ವೈ.ಬೆಳ್ಳುಬ್ಬಿ, ಡಿವೈ.ಎಸ್.ಪಿ, ರವರು ಫಿರ್ಯಾದಿಯಾದ ಶ್ರೀ ಮಹದೇವಪ್ಪ ಕೆಂಚಪ್ಪ ಹಿರೇ ಕುರುಬರ ಕಣಕಾಲ, ಬಸವನಬಾಗೇವಾಡಿ ಇವರ ಸಂಬಂಧಿಕರ ಮೇಲೆ ಕೊಟ್ಟಿದ್ದ ಪ್ರಕರಣದಲ್ಲಿ ಇಬ್ಬರು ಹೆಣ್ಣು ಮಕ್ಕಳ ಹೆಸರನ್ನು ಕೇಸಿನಿಂದ ತೆಗೆಯಿಸುವ ಕೆಲಸವನ್ನು ಮಾಡಲು ರೂ.20,000/–ಗಳ ಅಕ್ರಮ ಸಂಭಾವನೆಯನ್ನು ಕೇಳಿರುತ್ತಾರೆ. ಫಿರ್ಯಾದಿಯು ಲಂಚವನ್ನು ಕೊಡಲು ಬಯಸದ ಕಾರಣ ಸದರಿ ಸಾರ್ವಜನಿಕ ಅಧಿಕಾರಿಯ ವಿರುದ್ಧ ಕಾನೂನು ಕ್ರಮ ಕೈಗೊಳ್ಳುವ ಬಗ್ಗೆ ದೂರನ್ನು ಸಲ್ಲಿಸಿದ್ದು ಇರುತ್ತದೆ. ಸದರಿ ದೂರಿನಂತೆ ತನಿಖಾಧಿಕಾರಿಗಳು ಬಲೆ ಬೀಸುವ ಮೊದಲಿನ ಎಲ್ಲಾ ಔಚಿತ್ಯಪೂರ್ಣ ಕಾರ್ಯಕ್ರಮಗಳನ್ನು ನೆರವೇರಿಸಿದ ನಂತರ ದಿನಾಂಕ 25–10–2007ರಂದು ಬಸವನಬಾಗೇವಾಡಿ ಪೊಲೀಸ್ ಠಾಣೆ, ಡಿವೈ.ಎಸ್.ಪಿ ಕಾರ್ಯಾಲಯದಲ್ಲಿ ಬೀಸಿದ ಟ್ರ್ಯಾಪ್ ಪ್ರಕರಣ ಯಶಸ್ವಿಯಾಗಿ ಶ್ರೀ ಬಿ.ವೈ.ಬೆಳ್ಳುಬ್ಬಿ, ಡಿವೈ.ಎಸ್.ಪಿ, ಅಕ್ರಮ ಸಂಭಾವನೆಯಾದ 20,000/– ರೂ.ಗಳನ್ನು ಸದರಿ ಸರ್ಕಾರಿ ಕೆಲಸವನ್ನು ಮಾಡಲು ಕೇಳಿ ಪಡೆಯುತ್ತಿದ್ದಾಗ ಸಿಕ್ಕಿಹಾಕಿಕೊಂಡಿರುತ್ತಾರೆ. ಆಪಾದಿತರಾದ ಶ್ರೀ ಬಿ.ವೈ. ಬೆಳ್ಳುಬ್ಬಿ, ಡಿವೈ.ಎಸ್.ಪಿ. ರವರ ಬಲಗೈ ಬೆರಳುಗಳನ್ನು ಒಂದು ಬಟ್ಟಲಲ್ಲಿ ಅದ್ದಿ ತೊಳೆಯಿಸಿದಾಗ ಬಟ್ಟಲಿನಲ್ಲಿಯ ದ್ರಾವಣವು ರೂಪಾಂತರ ಹೊಂದಲಿಲ್ಲ. ಅದೇ ರೀತಿ ಆಪಾದಿತರ ಎಡಗೈ ಬೆರಳುಗಳನ್ನು ಒಂದು ಬಟ್ಟಲಲ್ಲಿ ಅದ್ದಿ ತೊಳೆಯಿಸಿದಾಗ ಬಟ್ಟಲಿನಲ್ಲಿಯ ದ್ರಾವಣವು ರೂಪಾಂತರ ಹೊಂದಲಿಲ್ಲ ಆಪಾದಿತರಿಗೆ ಫಿರ್ಯಾದಿ ಕಡೆಯಿಂದ ಕೇಳಿ ಪಡೆದುಕೊಂಡ ಲಂಚದ ಹಣವನ್ನು ಹಾಜರುಪಡಿಸಲು ತಿಳಿಸಿದಾಗ ಆಪಾದಿತ ಅಧಿಕಾರಿಯವರ ಟೇಬಲ್ ಮೇಲೆ ಇದ್ದ ಒಂದು ಫೈಲ್ ಕೆಳಗೆ ಇಟ್ಟ ರೂ ಇಪ್ಪತ್ತು ಸಾವಿರ ಲಂಚದ ಹಣವನ್ನು ಹಾಜರುಪಡಿಸಿದರು. ಸದರಿ ಹಣವನ್ನು ಪಂಚರು ಪರಿಶೀಲಿಸಿದಾಗ ಸದರಿ ನೋಟುಗಳು ವಹಿಸಿಕೊಡುವ ಪಂಚನಾಮ ಕಾಲಕ್ಕೆ ನಮೂದಿಸಿದ ನಂಬರಿನ ರೂ. 500/– ದರದ 40 ನೋಟುಗಳು ಒಟ್ಟು ರೂ. ಇಪ್ಪತ್ತು ಸಾವಿರ ಇರುವುದು ಕಂಡು ಬಂದಿತ್ತು. ನೆರಳು ಸಾಕ್ಷಿಯು ಅಕ್ರಮ ಸಂಭಾವನೆಯ ಬೇಡಿಕೆ ಮತ್ತು ಪಡೆಯುವಿಕೆಗೆ ಸಂಬಂಧಿಸಿದಂತೆ ಫಿರ್ಯಾದಿ ಹಾಗೂ ಆಪಾದಿತ ಸಾರ್ವಜನಿಕ ಅಧಿಕಾರಿ ನಡುವಿನ ವ್ಯವಹಾರವನ್ನು ಗಮನಿಸಿರುತ್ತಾರೆ. ಮತ್ತು ಸಂಭಾಷಣೆಯನ್ನು ಆಲಿಸಿರುತ್ತಾರೆ. ಅಕ್ರಮ ಸಂಭಾವನೆಯಾದ ರೂ. 20,000/– ಗಳನ್ನು ಶ್ರೀ ಬಿ.ವೈ. ಬೆಳ್ಳುಬ್ಬಿ ರವರಿಂದ ಬಸವನಬಾಗೇವಾಡಿ ಪೊಲೀಸ್ ಠಾಣೆ, ಡಿವೈ.ಎಸ್.ಪಿ ಕಾರ್ಯ ಸ್ಥಳದಲ್ಲಿ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ.

ತನಿಖಾ ಕಾಲದಲ್ಲಿ ಸಂಗ್ರಹಿಸಲಾದ ದಾಖಲೆಗಳನ್ನು ಹಾಗೂ ಸಾಕ್ಷಿದಾರರ ಹೇಳಿಕೆಗಳನ್ನು ಗಮನಿಸಿ ಆರೋಪಿತ ಅಧಿಕಾರಿಗಳ ವಿರುದ್ಧ ಮಾಡಲಾಗಿರುವ ಆರೋಪಗಳು ಮೇಲ್ನೋಟಕ್ಕೆ ಸಾಬೀತಾಗುವ ಬಗ್ಗೆ ಪೂರಕ ಅಂಶಗಳಿರುವುದರಿಂದ ಈ ಎಲ್ಲಾ ಕಾರಣಗಳಿಂದ ಆಪಾದಿತರು ಲಂಚ ನಿರೋಧ ಕಾಯ್ದೆ–1988ರ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ

13(2) ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಸರ್ಕಾರಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಲಂಚ ನಿರೋಧ ಕಾಯ್ದೆ, 1988ರ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ 13(2) ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯ ಎಂದು ಸರ್ಕಾರವು ಮನಗಂಡಿದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತರನ್ನು ಕೆಲಸದಿಂದ ತೆಗೆದು ಹಾಕಲು ಅಧಿಕಾರವುಳ್ಳದ್ದಾಗಿರುತ್ತದೆ. ಆದ್ದರಿಂದ ಲಂಚ ನಿರೋಧಕ ಕಾಯಿದೆ 1988ರ ಕಲಂ 19 ರನ್ವಯ ಆಪಾಧಿತ ಸಾರ್ವಜನಿಕ ಅಧಿಕಾರಿ ಶ್ರೀ ಬಿ.ವೈ.ಬೆಳ್ಳುಬ್ಬಿ, ಡಿವೈ.ಎಸ್.ಪಿ, ರವರನ್ನು ಕಲಂ 7 ಮತ್ತು 13(ಸಿ) ಜೊತೆಗೆ ಓದಲಾದ 13(2) ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು, ಮಂಜೂರಾತಿ ನೀಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ. ಅದರಂತೆ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 410 ಪೊಸಿಪ 2007, ಬೆಂಗಳೂರು, ದಿನಾಂಕ: 1ನೇ ಏಪ್ರಿಲ್, 2009.**

ಭ್ರಷ್ಟಾಚಾರ ನಿರ್ಮೂಲನಾ ಕಾಯಿದೆ 1988ರ ಕಲಂ 19(1)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಬಿ.ವೈ.ಬೆಳ್ಳುಬ್ಬಿ, ಡಿವೈ.ಎಸ್.ಪಿ, ಬಸವನಬಾಗೇವಾಡಿ, ಬಿಜಾಪುರ ಇವರನ್ನು ಸದರಿ ಕಾಯಿದೆ ಕಲಂ 7, 13(1)(ಸಿ) ಜೊತೆಯಲ್ಲಿ ಓದಲಾದ ಕಲಂ 13(2) ರನ್ವಯ ಮೇಲೆ ಹೇಳಿದ ಆರೋಪಕ್ಕಾಗಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲೋಕಾಯುಕ್ತ ಪೊಲೀಸರಿಗೆ ಈ ಮೂಲಕ ಮಂಜೂರಾತಿಯನ್ನು ನೀಡುತ್ತದೆ.

ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಾವಳಿಗಳು, 1977ರ ನಿಯಮ 19 ರನ್ವಯ ಸರ್ಕಾರದ ಪರವಾಗಿ ಹೊರಡಿಸಲಾಗುವ ಆದೇಶಕ್ಕೆ ಸಹಿ ಮಾಡಲು ಈ ಕೆಳಕಂಡ ಪ್ರಾಧಿಕಾರಿಯು ಅಧಿಕಾರ ಹೊಂದಿದ್ದಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1105

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ:** 2008–09 ನೇ ಸಾಲಿನ ಸವಿವರ ಅಂದಾಜಿನಲ್ಲಿ ಲೆಕ್ಕ ಶೀರ್ಷಿಕೆ 4702 ಅಡಿ ಅನುಮೋದನೆಯಾಗಿರುವ ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರ ವ್ಯಾಪ್ತಿಯಲ್ಲಿ ಬರುವ ಕಾಮಗಾರಿಗಳ ಅಂದಾಜುಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** 1) ದಿನಾಂಕ:25.02.2009ರ ಬಿಜಾಪುರ, ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್‌ರವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜೆಪಿ/ಎಇ–12/2008–09/1270.

2) ಸರ್ಕಾರದ ಆದೇಶ ಸಂಖ್ಯೆ ಸನೀಇ 41 ಮಸಾವಿ 2009 (1) ದಿನಾಂಕ 02.03.2009.

**ಪ್ರಸ್ತಾವನೆ:**

2008–09ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ 4702–00–101–1–02–139 ಹೊಸಕೆರೆಗಳ ನಿರ್ಮಾಣ–ಪ್ರಧಾನ ಕಾಮಗಾರಿಗಳು ಅಡಿ 1 ಕಾಮಗಾರಿಯ (ಕಾಮಗಾರಿಯ ವಿವರಗಳನ್ನು ಅನುಬಂಧದಲ್ಲಿ ತಿಳಿಸಲಾಗಿದೆ) ಅಂದಾಜು ಪಟ್ಟಿಗೆ (ಅಂದಾಜು ಮೊತ್ತ 246.00ಲಕ್ಷ ರೂ.ಗಳು) ಆಡಳಿತಾತ್ಮಕ ಅನುಮೋದನೆ ನೀಡುವಂತೆ ಮೇಲೆ ಉಲ್ಲೇಖ (1) ರಲ್ಲಿ ಓದಲಾದ ಪತ್ರದಲ್ಲಿ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್‌ರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ ಕಾಮಗಾರಿಗೆ ಆಯವ್ಯಯದಲ್ಲಿ ಒದಗಿಸಿರುವ ಅನುದಾನ ವಾಸ್ತವಿಕ ಅಂದಾಜು ಮೊತ್ತದ ಶೇ.30 ಕ್ಕಿಂತ ಕಡಿಮೆ ಇರುವುದರಿಂದ ಉಲ್ಲೇಖ (2) ರ ಆದೇಶದಲ್ಲಿ ಅನುದಾನದ ಮರುಹೊಂದಾಣಿಕೆ ಮಾಡಿದೆ.

ಆಡಳಿತಾತ್ಮಕ ಅನುಮೋದನೆಗೆ ಕೋರಿರುವ ಕಾಮಗಾರಿಯ ಅಂದಾಜು ಪಟ್ಟಿಯನ್ನು 2008–09ನೇ ಸಾಲಿಗೆ ಮುಂದುವರೆಸಿರುವ 2007–08ನೇ ಸಾಲಿನ ಸಣ್ಣ ನೀರಾವರಿ ಬೆಳಗಾವಿ ವೃತ್ತದ ದರಪಟ್ಟಿಯ ದರಗಳನ್ನು ಅಳವಡಿಸಿ ತಯಾರಿಸಲಾಗಿದೆ. ಈ ಕಾಮಗಾರಿಯು ಆರ್ಥಿಕವಾಗಿ ಹಾಗೂ ತಾಂತ್ರಿಕವಾಗಿ ಶಕ್ಯವಾಗಿದೆ.

ಪ್ರಸ್ತಾಪಿಸಿರುವ ಕಾಮಗಾರಿಯ ಅಂದಾಜು ಮೊತ್ತ, ಆಯವ್ಯಯದ ಲೆಕ್ಕ ಶೀರ್ಷಿಕೆ, ಅನುದಾನ, ಕಾಮಗಾರಿಯ ಸ್ವರೂಪ ಹಾಗೂ ಅಂದಾಜಿನಲ್ಲಿ ಅಳವಡಿಸಿರುವ ಕೆಲಸಗಳ ವಿವರ, ಸೃಷ್ಟಿಯಾಗಲಿರುವ ಹೊಸ ಅಚ್ಚುಕಟ್ಟು ಹಾಗೂ ಲಾಭ ವೆಚ್ಚದ ಅನುಪಾತ ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿದೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 15 ಮಸಾವಿ 2009 (4), ಬೆಂಗಳೂರು, ದಿನಾಂಕ: 2ನೇ ಮಾರ್ಚ್ 2009.**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ವ್ಯಾಪ್ತಿಗೆ ಬರುವ ಅಡಕಗಳಿಸಿರುವ ಅನುಬಂಧದಲ್ಲಿ ತಿಳಿಸಿರುವ ಒಟ್ಟು ರೂ 246.00 ಲಕ್ಷ (ಇನ್ನೂರ ನಲವತ್ತಾರು ಲಕ್ಷ ರೂ.) ಮೊತ್ತದ 1 ಕಾಮಗಾರಿಯ ಅಂದಾಜು ಪಟ್ಟಿಗೆ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಿದೆ.

1) ಕಾಮಗಾರಿಯ ವೆಚ್ಚವು ಯಾವುದೇ ಕಾರಣಕ್ಕೂ ಅನುಮೋದಿಸಿದ ಟೆಂಡರ್ ಮೊತ್ತಕ್ಕಿಂತ ಹೆಚ್ಚಾಗಬಾರದು ಹಾಗೂ ಕಾಮಗಾರಿಯನ್ನು ಕಾಲಮಿತಿಯೊಳಗೆ ಪೂರ್ಣಗೊಳಿಸತಕ್ಕದ್ದು.
2) ಒಂದು ವೇಳೆ ಸ್ಥಳ ಪರಿಸ್ಥಿತಿಗೆ ಅನುಗುಣವಾಗಿ ಹೆಚ್ಚಳ ನಿರೀಕ್ಷಿಸಿದಲ್ಲಿ ತಕ್ಷಣವೇ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಮಗಾರಿಯನ್ನು ಪೂರ್ಣಗೊಳಿಸತಕ್ಕದ್ದು.
3) ಕಾಮಗಾರಿ ಪ್ರಾರಂಭಿಸುವ ಮುನ್ನ ವಿನ್ಯಾಸ ಬದಲಾವಣೆಯಿಂದಾಗಿ ಅಥವಾ ಬೇರೆ ಕಾರಣದಿಂದ ಅನುಮೋದಿಸಿದ ಅಂದಾಜು ಮೊತ್ತ ಹೆಚ್ಚಾಗುವ ಸಂಭವ ಇದ್ದಲ್ಲಿ, ತಕ್ಷಣ ಪರಿಷ್ಕೃತ ಅಂದಾಜಿಗೆ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ನಂತರ ಕಾಮಗಾರಿಯನ್ನು ಪ್ರಾರಂಭಿಸುವುದು.
4) ಕಾಮಗಾರಿಯ ಅಂದಾಜು ಪಟ್ಟಿಗೆ ಸಂಬಂಧಿಸಿದಂತೆ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿ/ ತಾಂತ್ರಿಕ ಸಮಿತಿಯು ಸಭೆಯಲ್ಲಿ ನೀಡಿರುವ ಸೂಚನೆಗಳನ್ನು ಚಾಚೂ ತಪ್ಪದೇ ಪಾಲಿಸತಕ್ಕದ್ದು.
5) ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಅನುಸಾರ ಟೆಂಡರ್ ಕರೆದು ತೆಗೆದುಕೊಳ್ಳತಕ್ಕದ್ದು.
6) ಕಾಮಗಾರಿ ಪೂರ್ಣಗೊಂಡ ಕೂಡಲೇ ಪಿ.ಸಿ.ಆರ್ ವರದಿಯನ್ನು ಸಲ್ಲಿಸತಕ್ಕದ್ದು ಹಾಗೂ ಅವಶ್ಯಕತೆ ಇದ್ದಲ್ಲಿ ಪರಿಷ್ಕೃತ ಅಂದಾಜು ತಯಾರಿಸಿ ಟಿ.ಎ.ಸಿ. ಅನುಮೋದನೆ ಪಡೆದು ಸಂಬಂಧಿಸಿದ ಸಕ್ಷಮ ಅಧಿಕಾರಿಗಳಿಗೆ ಅನುಮೋದನೆಗಾಗಿ ಸಲ್ಲಿಸುವುದು.
7) ಕಾಮಗಾರಿಗೆ ಅಗತ್ಯವಿರುವ ಜಮೀನಿನ ಸ್ವಾಧೀನಕ್ಕಾಗಿ ನಿಯಮಾನುಸಾರ ತಕ್ಷಣ ಭೂಸ್ವಾಧೀನ ಪ್ರಕ್ರಿಯೆ ಪ್ರಾರಂಭಿಸಲು ಕ್ರಮ ಕೈಗೊಳ್ಳತಕ್ಕದ್ದು.
8) ಇ.ಐ.ಆರ್.ಎಲ್/ವರ್ಕ್‌ಸ್ಲಿಪ್‌ಗಳನ್ನು ಸಲ್ಲಿಸಬೇಕಾದಲ್ಲಿ ತಕ್ಷಣವೇ ಸಲ್ಲಿಸತಕ್ಕದ್ದು.
9) ತಾಂತ್ರಿಕ ಮಂಜೂರಾತಿಯನ್ನು ನೀಡುವ ಮೊದಲು ಅಂದಾಜನ್ನು ಮತ್ತೊಮ್ಮೆ ವಿವರವಾಗಿ ಪರಿಶೀಲಿಸುವುದು.
10) ಈ ಯೋಜನೆಗೆ ನೀರು ಬಳಕೆದಾರರ ಸಂಘವನ್ನು ಸೃಜಿಸಬೇಕು ಹಾಗೂ ನಿರ್ವಹಣೆಯನ್ನು ಸದರಿ ಸಂಘಕ್ಕೆ ವಹಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ: 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಲಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

**ಅನುಬಂಧ**

**ಸರ್ಕಾರದ ಆದೇಶ ಸಂಖ್ಯೆ ಸನೀಇ 15 ಮಸಾವಿ 2009, (4) ದಿನಾಂಕ 02.03.2009**

**(ಮೊತ್ತ ಲಕ್ಷ ರೂ.ಗಳಲ್ಲಿ) ಹಾಗೂ (ವಿಸ್ತೀರ್ಣ ಹೆಕ್ಟೇರ್‌ಗಳಲ್ಲಿ)**

| ಕ್ರಮ ಸಂಖ್ಯೆ | ಕಾಮಗಾರಿ ಹೆಸರು | ಸ್ವೀಕೃತವಾಗಿರುವ ಅಂದಾಜು ಮೊತ್ತ | ಅನುಬಂಧ–ಇ ವಿವರಗಳು | | ನದಿ ಕೊಳ್ಳ | ಕಾಮಗಾರಿ ಸ್ವರೂಪ | ಹೊಸ ಅಚ್ಚುಕಟ್ಟು | ಪುನರ್ ಸ್ಥಾಪಿಸಲಾಗುವ/ ಸ್ಥಿರೀಕರಿಸುವ ಅಚ್ಚುಕಟ್ಟು | ಕಾಮಗಾರಿಯ ಸಂಕ್ಷಿಪ್ತ ವಿವರಗಳು |
|---|---|---|---|---|---|---|---|---|---|
| | | | ಅಂದಾಜು ಮೊತ್ತ | ಅನುದಾನ | | | | | |
| 1 | 2 | 3 | 4 | 5 | 6 | 7 | 8 | 9 | 10 |
| **ಲೆಕ್ಕ ಶೀರ್ಷಿಕೆ 4702–00–101–1–02–139 ಹೊಸ ಕೆರೆಗಳ ನಿರ್ಮಾಣ (ಪ್ರಧಾನ ಕಾಮಗಾರಿಗಳು** | | | | | | | | | |
| 1 | ಧಾರವಾಡ ಜಿಲ್ಲೆ ಹಾಗೂ ತಾಲ್ಲೂಕಿನ ದೇವರ ಹುಬ್ಬಳ್ಳಿ (ನಾರಾಯಣ ಕೊಪ್ಪ) ಹತ್ತಿರ ಸ.ನೀ. ಕೆರೆ ನಿರ್ಮಾಣ | 246.00 | 200.00 | 60.00 | ಕೃಷ್ಣಾ | ಹೊಸ ಕಾಮಗಾರಿ | 102 | | ಹೊಸ ಕೆರೆ ನಿರ್ಮಾಣ ಏರಿಯ ಉದ್ದ–405.00ಮೀ ಎತ್ತರ–9.11ಮೀ., ಕೋಡಿಯ ಉದ್ದ–15.00ಮೀ ಶೇಖರಣಾ ಸಾಮರ್ಥ್ಯ–0.2642Mcum |
| | ಆದೇಶ ಸಂಖ್ಯೆ ಸನೀಇ 41 ಮಸಾವಿ 2009 | | | 13.80 | | | | | |

| | | | | | | | | | |
|---|---|---|---|---|---|---|---|---|---|
| | (1) ದಿನಾಂಕ 02.03.2009 ರಲ್ಲಿ ಅನುಮೋದಿಸಿರುವ ಮರು ಹೊಂದಾಣಿಕೆ ಅನುದಾನ | | | | | | | | ಎಡದಂಡೆ ಕಾಲುವೆ ಉದ್ದ–870ಮೀ ಹಾಗೂ ಬಲದಂಡೆ ಕಾಲುವೆ ಉದ್ದ–930ಮೀ ಶೇ.10ರ ಬಡ್ಡಿದರದಲ್ಲಿ ಲಾಭ ವೆಚ್ಚದ ಅನುಪಾತ 1.09 |
| | **ಒಟ್ಟು** | **246.00** | **200.00** | **73.80** | | | | | |

**ಕೆ. ಸುಧಾಕರ ಶೆಟ್ಟಿ**

ಪಿ.ಆರ್. 1125 ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

## PERSONNEL AND ADMINISTRATIVE REFORMS SECRETARIAT

**Sub:** Reconstitution of Departmental Promotion Committees.

**Read:** 1. Government Order No.DPAR 271 SAS 2000, dated 27-5-2000 & 21-12-2001.

2. Government of India Letter No.20011/4/92-AIS(II), dated 28-3-2000.

3. Government of India Notification No.11031/09/2008-AIS-II(A), dated 30-12-2008

**PREAMBLE:**

In Government Orders read at (1) above, Departmental Promotion Committees were constituted to screen the promotion of IAS officers to various grades of Pay of IAS, in light of the Government of India letter read at (2) above in which guidelines for promotion of IAS officers to various grades and for constitution of Departmental Promotion Committees for the said purpose were issued.

In the Government of India Notification read at (3) above, cadre strength of IAS officers in Karnataka was reviewed and the total authorized strength of Karnataka cadre was increased. The guidelines of Government of India was reviewed in this backdrop and the following orders are issued.

**Government Order No. DPAR 93 SAS 2009, Bangalore, Dated: 20th MAY, 2009**

In supersession of Government Order No.DPAR 271 SAS 2000, dated 27-5-2000 and 21-12-2001, Government are pleased to reconstitute the Departmental Promotion Committees to screen the IAS officers of Karnataka Cadre for promotion in the various grades of pay as follows :

**I. Promotion in the grade of -**

**Senior Time Scale (Pay Band-3: Rs.15600-39100 Plus Grade Pay Rs. 6600)**

**Selection Grade (Pay Band-4: Rs.37400-67000 Plus Grade Pay Rs. 8700)**

**Supertime Scale (Pay Band-4: Rs.37100-67000 Plus Grade Pay Rs. 10000)**

| | | |
|---|---|---|
| 1 | Chief Secretary to Government - | Chairman |
| 2 | Two officers working in the grade of Principal Secretary to State Government | Members |

**II. Promotion in the Grade of Above Supertime Scale**

**(Pay Band 4 – Rs.37400-67000 Plus Grade Pay Rs.12000)**

| | | |
|---|---|---|
| 1. Chief Secretary to Government | - | Chairman |
| 2. Additional Chief Secretary to Government | - | Member |
| 3. One senior officer in the grade of Principal Secretary to Government | - | Member |

**III. Promotion in the grade of Chief Secretary to Government (Rs.80000/- fixed)**

| | | |
|---|---|---|
| 1. Chief Secretary to Government | - | Chairman |
| 2. Additional Chief Secretary to Government | - | Member |
| 3. A senior officer in the Apex Scale on Central Deputation | - | Member |

**IV. Selection Committee as per IAS (Appointment by Promotion) Regulations, 1955 & IAS (Appointment by Selection) Regulations, 1997**

1. Chief Secretary to Government - Chairman
2. Additional Chief Secretary - Member
3. Secretary to Government, DP&AR - Member

These order shall come in to force with immediate effect and will remain in force until further orders.

By order and in the name of the Governor of Karnataka,

**K.G. ANANTHA**

P.R. 1386

Under Secretary to Government,

Department of Personnel and Administrative Reforms (Services-I)

**ಕಂದಾಯ ಸಚಿವಾಲಯ**

**ವಿಷಯ :** ಶ್ರೀ ಟಿ. ಜವರೇಗೌಡ, ತಹಶೀಲ್ದಾರ್ ಗ್ರೇಡ್–2, ಪ್ರಸ್ತುತ ತಹಶೀಲ್ದಾರ್, ಕೆ.ಆರ್. ನಗರ ತಾಲ್ಲೂಕು ಇವರ ಹಿಂದಿನ ಸೇವೆಯನ್ನು ಪರಿಗಣಿಸುವ ಕುರಿತು.

**ಓದಲಾಗಿದೆ :** 1 ಸರ್ಕಾರದ ಅಧಿಸೂಚನೆ ಸಂ:ಕಂಇ 8 ಎಟಿಎಸ್ 2006, ದಿನಾಂಕ:15.4.2006

2. ಶ್ರೀ ಟಿ. ಜವರೇಗೌಡ, ಇವರ ಮನವಿ ದಿನಾಂಕ:7.10.2006.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1), ದಿನಾಂಕ:15.4.2006ರ ಅಧಿಸೂಚನೆಯಲ್ಲಿ, ಶ್ರೀ ಟಿ. ಜವರೇಗೌಡ ಇವರು ಕಂದಾಯ ಇಲಾಖೆಯ ತಹಶೀಲ್ದಾರ್ ಗುಂಪು–ಬಿ ಹುದ್ದೆಗೆ ನೇಮಕಾತಿಗೊಂಡಿರುತ್ತಾರೆ. ಸದರಿಯವರು ಈ ಹುದ್ದೆಗೆ, ಸೇರುವ ಪೂರ್ವದಲ್ಲಿ ಶಿಕ್ಷಣ ಇಲಾಖೆಯಲ್ಲಿ, ಸಹ ಶಿಕ್ಷಕರಾಗಿ ದಿನಾಂಕ:12.12.1994 ರಿಂದ 19.4.2006ರ ವರೆಗೆ ಸಲ್ಲಿಸಿದ ಸೇವೆಯನ್ನು ಪಿಂಚಣಿ ಮಂಜೂರಾತಿಗೆ ಪರಿಗಣಿಸಲು ಕೋರಿರುತ್ತಾರೆ. ಸದರಿಯವರು ವಿಭಾಗೀಯ ಕಾರ್ಯದರ್ಶಿಗಳು, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಮೈಸೂರು ಇವರ ಜ್ಞಾಪನಾ ಸಂ:ಜಿ. 4. ಇಲಾಖಾ ಅನು. ಬಗ್ಗೆ. 05. 2006–07 ದಿನಾಂಕ:19.4.2006 ರನ್ವಯ ಶಿಕ್ಷಣ ಇಲಾಖೆಯಿಂದ ಬಿಡುಗಡೆ ಹೊಂದಿರುತ್ತಾರೆ. ಆದ್ದರಿಂದ ಸದರಿಯವರು ಶಿಕ್ಷಣ ಇಲಾಖೆಯಲ್ಲಿ ದಿನಾಂಕ:12.12.1994 ರಿಂದ 19.4.2006 ರವರೆಗೆ ಸೇವಾ ಅವಧಿಯನ್ನು ಪೂರೈಸಿದ್ದು, ಇವರ ಹಿಂದಿನ ಸೇವೆಯನ್ನು ಪರಿಗಣಿಸುವಂತೆ ಸರ್ಕಾರಕ್ಕೆ ಮನವಿ ಸಲ್ಲಿಸಿರುತ್ತಾರೆ.

ಶ್ರೀ ಟಿ. ಜವರೇಗೌಡ ಇವರ ಮನವಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಸದರಿಯವರ ಮೂಲ ಸೇವಾ ಪುಸ್ತಕದಲ್ಲಿ ದಾಖಲಿಸಿರುವಂತೆ ಇವರು ಈ ಹಿಂದೆ ಶಿಕ್ಷಣ ಇಲಾಖೆಯಲ್ಲಿ ಸಹ ಶಿಕ್ಷಕರಾಗಿ ಸಲ್ಲಿಸಿದ್ದ ಸೇವೆ ದಿನಾಂಕ:12.12.1994 ರಿಂದ 19.4.2006 ರವರೆಗೆ ಸೇವಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 224(ಎ) ರೀತ್ಯ ಪ್ರಸ್ತುತ ಹುದ್ದೆಯ ತಹಶೀಲ್ದಾರ್ ಹುದ್ದೆಯ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ:ಆರ್ ಡಿ 275 ಎಎಸ್ ಡಿ 2006, ಬೆಂಗಳೂರು, ದಿನಾಂಕ:30ನೇ ಮಾರ್ಚ್ 2009**

ಮೇಲೆ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಸರ್ಕಾರವು ಶ್ರೀ ಟಿ. ಜವರೇಗೌಡ, ತಹಶೀಲ್ದಾರ್, ಕೆ.ಆರ್.ನಗರ ತಾಲ್ಲೂಕು, ಮೈಸೂರು ಜಿಲ್ಲೆ ಇವರು ಕಂದಾಯ ಇಲಾಖೆಯ ಸೇವೆಗೆ ಸೇರುವ ಪೂರ್ವದಲ್ಲಿ ಶಿಕ್ಷಣ ಇಲಾಖೆಯಲ್ಲಿ ಸಹ ಶಿಕ್ಷಕರಾಗಿ ದಿನಾಂಕ:12.12.1994 ರಿಂದ 19.4.2006ರವರೆಗೆ ಸಲ್ಲಿಸಲಾಗಿರುವ ಸೇವೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 224(ಎ) ರೀತ್ಯ ಅವರ ಪ್ರಸ್ತುತ ತಹಶೀಲ್ದಾರ್ ಹುದ್ದೆಯ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ (ವೆಚ್ಚ7–) ರವರ ಟಿಪ್ಪಣಿ ಸಂ:ಆಇ 1683 ವೆಚ್ಚ–7/2008, ದಿನಾಂಕ:5.3.2009ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1101

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3),

**ವಿಷಯ :** ಶ್ರೀ ಸಿದ್ದಪ್ಪ ಹುಲ್ಲೋಳಿ ತಹಶೀಲ್ದಾರ್, ಗ್ರೇಡ್–2 ಪ್ರಸ್ತುತ ತಹಶೀಲ್ದಾರ್, ಜಮಖಂಡಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ ಇವರ ಹಿಂದಿನ ಸೇವೆಯನ್ನು ಪರಿಗಣಿಸುವ ಕುರಿತು.

**ಓದಲಾಗಿದೆ :** ಶ್ರೀ ಸಿದ್ದಪ್ಪ ಹುಲ್ಲೋಳಿ, ತಹಶೀಲ್ದಾರ್ ಇವರ ಮನವಿ ದಿನಾಂಕ:19.12.2006.

**ಪ್ರಸ್ತಾವನೆ:**

ಶ್ರೀ ಸಿದ್ದಪ್ಪ ಹುಲ್ಲೋಳಿ, ತಹಶೀಲ್ದಾರ್, ಇವರು ಮೇಲೆ ಓದಲಾದ ದಿನಾಂಕ:19.12.2006ರಲ್ಲಿ ಸರ್ಕಾರಕ್ಕೆ ಮನವಿಯನ್ನು ಸಲ್ಲಿಸಿ, ಸದರಿಯವರು ಹಿಂದೆ ಸರ್ಕಾರಿ ಪ್ರೌಢಶಾಲೆ, ಹರವಾಳ, ಜೀವರ್ಗಿ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ ಇಲ್ಲಿ ದಿನಾಂಕ:10.1.2004 ರಿಂದ ದಿನಾಂಕ:27.6.2006ರವರೆಗೆ ಸಹ ಶಿಕ್ಷಕರಾಗಿ ಸೇವೆ ಸಲ್ಲಿಸಿರುವುದರಿಂದ ಇವರ ಹಿಂದಿನ ಸೇವೆಯನ್ನು ನಿವೃತ್ತಿ ವೇತನದ ಸೌಲಭ್ಯಕ್ಕಾಗಿ ಪರಿಗಣಿಸುವಂತೆ ಕೋರಿರುತ್ತಾರೆ.

ಸದರಿ ಮನವಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಶ್ರೀಯುತರ ಸೇವಾ ಪುಸ್ತಕದಲ್ಲಿ ದಾಖಲಿಸಿರುವಂತೆ ಶಿಕ್ಷಣ ಇಲಾಖೆಯಲ್ಲಿ ಸಹ ಶಿಕ್ಷಕರಾಗಿ ಸಲ್ಲಿಸಿದ್ದ ದಿನಾಂಕ:10.1.2004 ರಿಂದ 27.6.2006ರ ವರೆಗಿನ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 224–ಎ ರೀತ್ಯ ಪ್ರಸ್ತುತ ಹುದ್ದೆಯ ನಿವೃತ್ತ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ನಿರ್ಧರಿಸಿದೆ. ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂ:ಆರ್‌ಡಿ 42 ಎಎಸ್‌ಡಿ 2007, ಬೆಂಗಳೂರು, ದಿನಾಂಕ:30ನೇ ಮಾರ್ಚ್ 2009**

ಮೇಲೆ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಸರ್ಕಾರವು ಶ್ರೀ ಸಿದ್ದಪ್ಪ ಹುಲ್ಲೋಳಿ, ತಹಶೀಲ್ದಾರ್, ಪ್ರಸ್ತುತ ತಹಶೀಲ್ದಾರ್, ಜಮಖಂಡಿ ತಾಲ್ಲೂಕು ಬಾಗಲಕೋಟೆ ಜಿಲ್ಲೆ, ಇವರು ತಹಶೀಲ್ದಾರ್ ಗುಂಪು–ಬಿ ಹುದ್ದೆಗೆ ಸೇರುವ ಪೂರ್ವದಲ್ಲಿ ಶಿಕ್ಷಣ ಇಲಾಖೆಯಲ್ಲಿ ಸಹ ಶಿಕ್ಷಕರಾಗಿ ದಿನಾಂಕ:10.1.2004 ರಿಂದ ದಿನಾಂಕ: 27.6.2006ರವರೆಗೆ ಸಲ್ಲಿಸಲಾಗಿದ್ದ ಸೇವೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 224(ಎ) ರೀತ್ಯ ಅವರ ಪ್ರಸ್ತುತ ಹುದ್ದೆಯ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ (ವೆಚ್ಚ–7) ರವರ ಟಿಪ್ಪಣಿ ಸಂ:ಆಇ 16 ವೆಚ್ಚ–7/2008, ದಿನಾಂಕ:13.2.2008ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1102

**ಬಿ.ವಿ. ಚೌಕಿಮಠ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು–3),

**ವಿಷಯ :** ಬೆಂಗಳೂರು ನಗರ ಜಿಲ್ಲೆಯ 9 ಉಪ ನೋಂದಣಿ ಕಛೇರಿಗಳಿಗೆ ಲೀಸ್ ಲೈನ್ ಸಂಪರ್ಕ ಒದಗಿಸುವ ಬಗ್ಗೆ.

**ಓದಲಾಗಿದೆ :** ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ:Comp 18:2004–05, ದಿನಾಂಕ:30.9.2008/01.10.2008.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 30.9.2008/1.10.2008ರ ಪತ್ರದಲ್ಲಿ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರು ಬೆಂಗಳೂರು ನಗರ ಜಿಲ್ಲೆಯ 6 ಉಪ ನೋಂದಣಿ ಕಛೇರಿಗಳನ್ನು ವಿಭಜಿಸಿ ಹೊಸದಾಗಿ 9 ಉಪ ನೋಂದಣಿ ಕಛೇರಿಗಳನ್ನು ಅಂದರೆ 1) ಮಲ್ಲೇಶ್ವರಂ, 2) ಗಂಗಾನಗರ, 3) ಶಾಂತಿನಗರ, 4) ಬಿ.ಟಿ.ಎಂ. ಲೇಔಟ್, 5) ಚಾಮರಾಜಪೇಟೆ 6)ಯಶವಂತಪುರ, 7)ವಿಜಯನಗರ, 8)ಇಂದಿರಾನಗರ ಹಾಗೂ 9) ಹಲಸೂರು ಉಪ ನೋಂದಣಿ ಕಛೇರಿಗಳನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ:ಕಂಇ 46 ಮುನೋಸ 2007, ದಿನಾಂಕ:11.1.2008ರಲ್ಲಿ ಸೃಜಿಸಲಾಗಿದೆ.

ಉಪ ನೋಂದಣಿ ಕಛೇರಿಗಳಿಂದ XML ಜೆ–ಫಾರ್ಮಗಳನ್ನು ಆಯಾ ಜಿಲ್ಲಾ ನೋಂದಣಿ ಕಛೇರಿಗಳ ಮೂಲಕ ಎಸ್‌ಡಿಸಿಗೆ ರವಾನಿಸಲು ಹಾಗೂ ಬಿಡಿಎ ಉಪ ನೋಂದಣಿ ಕಛೇರಿಯಿಂದ ಕಳುಹಿಸಲ್ಪಡುವ ಮೆಮೊರ್‍ಯಾಂಡಮ್‌ಗಳನ್ನು ಸ್ವೀಕರಿಸಲು ಸದರಿ ಉಪ ನೋಂದಣಿ ಕಛೇರಿಗಳಿಗೆ ಸಂಪರ್ಕ ಜಾಲ ಸ್ಥಾಪಿಸುವುದು ಅತ್ಯವಶ್ಯವಿರುತ್ತದೆ. ಈಗಾಗಲೇ ಬೆಂಗಳೂರಿನ 39 ಉಪ ನೋಂದಣಿ/ಜಿಲ್ಲಾ ನೋಂದಣಿ ಕಛೇರಿಗಳಿಗೆ ಲೀಸ್‌ಲೈನ್ ಸಂಪರ್ಕ ಹಾಗೂ ಸೇವೆಯನ್ನು ಬಿಎಸ್ ಎನ್ ಎಲ್‌ರವರಿಂದ ಪಡೆದುಕೊಳ್ಳಲಾಗಿದೆ. ಒಂದೇ ಗುಣಮಟ್ಟದ ಸೇವೆ ಪಡೆಯಲು ಹಾಗೂ ಅದೇ ತಾಂತ್ರಿಕತೆಯ ಸಂಪರ್ಕ ಪಡೆಯುವುದಕ್ಕಾಗಿ ಈ 9 ಉಪ ನೋಂದಣಿ ಕಛೇರಿಗಳಿಗೆ ಲೀಸ್‌ಲೈನ್ ಸಂಪರ್ಕವನ್ನು ಬಿಎಸ್‌ಎನ್‌ಎಲ್ ರವರಿಂದ ಪಡೆಯುವುದು ಅತ್ಯವಶ್ಯವಿರುತ್ತದೆ. ಈ ರೀತಿಯಾಗಿ ಬಿಎಸ್‌ಎನ್‌ಎಲ್ ಇವರಿಂದಲೇ ಸೇವೆಯನ್ನು ಪಡೆಯಲು ತೀರ್ಮಾನಿಸಿದ ಸಂದರ್ಭದಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999 ರ ಕಲಂ (4)ರಲ್ಲಿ ಟೆಂಡರ್ ಪ್ರಕ್ರಿಯೆಯಿಂದ ವಿನಾಯಿತಿ ಇರುತ್ತದೆ.

ಸದರಿ ಲೀಸ್‌ಲೈನ್ ಸಂಪರ್ಕ ಹಾಗೂ ಸೇವೆಯ ಚಾಲ್ತಿಯಲ್ಲಿರುವ ಇ–ಆಡಳಿತ ಯೋಜನೆಯ ಒಂದು ಭಾಗವಾಗಿರುವುದರಿಂದ ಸರ್ಕಾರಿ ಸುತ್ತೋಲೆ ಸಂಖ್ಯೆ:ಡಿಪಿಎಆರ್ 39 ಇಜಿವಿ 2004, ದಿನಾಂಕ:13.6.2005 ರನ್ವಯ Empowered Committee ಯಿಂದ ಅನುಮತಿ ಪಡೆಯುವ ಅವಶ್ಯಕತೆ ಇರುವುದಿಲ್ಲ ಸದರಿ ಲೀಸ್‌ಲೈನ್ ವೆಚ್ಚ, ನೆಟ್‌ವರ್ಕ್ ಕಾಂಪೋನೆಂಟ್ ವೆಚ್ಚ ಮತ್ತು ಬಿಎಸ್‌ಎನ್‌ಎಲ್ ಪ್ರಾಜೆಕ್ಟ್ ಮ್ಯಾನೇಜ್ ಮೆಂಟ್ ವೆಚ್ಚಗಳ ಕುರಿತಂತೆ ಮೆ:ಬಿಎಸ್‌ಎನ್‌ಎಲ್ ರವರು ಒಟ್ಟು ರೂ. 7,22,668/– ಗಳ ದರ ನೀಡಿರುತ್ತಾರೆ. ಈ ಹಿಂದೆ ಇದೇ ದರಗಳನ್ವಯ 23 ಉಪ ನೋಂದಣಿ ಕಛೇರಿಗಳಿಗೆ ಹೊಸದಾಗಿ ಲೀಸ್ ಲೈನ್ ಸಂಪರ್ಕ ಒದಗಿಸುವ ಸಂಬಂಧ ಸರ್ಕಾರದ ಅಧಿಸೂಚನೆ ಸಂಖ್ಯೆ:ಕಂಇ 46 ಮುನೋಸ 2007, ದಿನಾಂಕ:11.1.2008 ರಲ್ಲಿ ಆದೇಶ ನೀಡಲಾಗಿದ್ದು, ಅದರಂತೆ ಹೊಸದಾಗಿ ಸೃಜಿಸಲಾಗಿರುವ 9 ಉಪ ನೋಂದಣಿ ಕಛೇರಿಗಳಿಗೆ 64 ಕೆಬಿಪಿಎಸ್ ಲೀಸ್ ಲೈನ್ ಸಂಪರ್ಕ ಜಾಲ ಸ್ಥಾಪಿಸಲು ಅನುಮತಿ ನೀಡಲು ಹಾಗೂ ಈ ಸಂಬಂಧ ಒಟ್ಟು 7,22,668/– ರೂ.ಗಳ ವೆಚ್ಚವನ್ನು ಮೆ:ಬಿಎಸ್‌ಎನ್‌ಎಲ್ ರವರಿಗೆ ಪಾವತಿಸಲು ಆಡಳಿತಾತ್ಮಕ ಹಾಗೂ ಆರ್ಥಿಕ ಮಂಜೂರಾತಿ ನೀಡುವಂತೆ ಹಾಗೂ ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2030–03–001–2–04 Charges of Supply of Registered Documents-051-General Expenses ನಲ್ಲಿ ಭರಿಸಲು ಅನುಮತಿ ನೀಡುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 332 ಮುನೋಮು 2008, ಬೆಂಗಳೂರು, ದಿನಾಂಕ:26ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ಹೊಸದಾಗಿ ಸೃಜಿಸಲಾಗಿರುವ 9 ಉಪ ನೋಂದಣಿ ಕಛೇರಿಗಳಿಗೆ 64 ಕೆಬಿಪಿಎಸ್ ಲೀಸ್‌ಲೈನ್ ಸಂಪರ್ಕ ಜಾಲವನ್ನು ಸ್ಥಾಪಿಸಲು ಆಡಳಿತಾತ್ಮಕ ಅನುಮತಿ ನೀಡಲಾಗಿದೆ.

ಸದರಿ ಯೋಜನೆಗೆ ತಗಲುವ ವೆಚ್ಚ ಒಟ್ಟು ರೂ. 7,22,668/–(ಏಳು ಲಕ್ಷದ ಇಪ್ಪತ್ತೆರಡು ಸಾವಿರದ ಆರು ನೂರ ಅರವತ್ತೆಂಟು ರೂಪಾಯಿಗಳು ಮಾತ್ರ) ಗಳನ್ನು ಮೆ:ಬಿಎಸ್‌ಎನ್‌ಎಲ್ ರವರಿಗೆ ಪಾವತಿಸಲು ಆರ್ಥಿಕ ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2030–03–001–2–04 Charges of Supply of Registered Documents-051-General Expenses ನಲ್ಲಿ ಭರಿಸುವುದು

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ:ಎಫ್ ಡಿ 1 ಟಿಎಫ್‌ಪಿ 1996, ದಿನಾಂಕ:10.7.1996ರಲ್ಲಿ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಲಾಗಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1103

**ಟಿ.ಕೆ. ರಾಮಚಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ),

**ವಿಷಯ :** ಬಸವನಗುಡಿ ಉಪ ನೋಂದಣಿ ಕಛೇರಿ ಕಾರ್ಯ ನಿರ್ವಹಿಸಲು ಖಾಸಗಿ ಕಟ್ಟಡದ ಬಾಡಿಗೆಯನ್ನು ನಿಗಧಿಪಡಿಸುವ ಕುರಿತು.

**ಓದಲಾಗಿದೆ :** ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ:ಬಿಎಲ್ ಡಿ 38/2007–08, ದಿನಾಂಕ:27.9.2008/1.10.2008.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 27.9.2008/1.10.2008ರ ಪತ್ರದಲ್ಲಿ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರು ಸರ್ಕಾರವು ಅಧಿಕ ಕೆಲಸದ ಒತ್ತಡವಿರುವ ಉಪ ನೋಂದಣಿ ಕಛೇರಿಗಳನ್ನು ವಿಭಜಿಸಿದ್ದು, ಬಸವನಗುಡಿ ಕಛೇರಿಯನ್ನು ವಿಭಜಿಸಿ, ಚಾಮರಾಜಪೇಟೆ ಮತ್ತು ಬಸವನಗುಡಿ ಎಂದು ಎರಡು ಕಛೇರಿಗಳನ್ನು ಮಾಡಿದ್ದು, ವಿಭಜಿಸುವ ಪೂರ್ವದಲ್ಲಿ ಬಸವನಗುಡಿ ಕಛೇರಿಯು ಚಾಮರಾಜಪೇಟೆಯಲ್ಲಿರುವುದರಿಂದ, ವಿಭಜನೆಯ ನಂತರ ಕಛೇರಿಯು ಚಾಮರಾಜಪೇಟೆ ಕಛೇರಿಯಾಗಿರುತ್ತದೆ ಹಾಗೂ ಬಸವನಗುಡಿ ಕಛೇರಿಯನ್ನು ಹೊಸದಾಗಿ ಪ್ರಾರಂಭಿಸಬೇಕಾಯಿತು. ಈ ಸಂಬಂಧ ಬಸವನಗುಡಿ ಉಪ ನೋಂದಣಿ ಕಛೇರಿ ಕಾರ್ಯನಿರ್ವಹಿಸಲು ಶ್ರೀ ಧೀರೇಂದ್ರ ಎಸ್.ಎ. ಇವರ ಒಡೆತನಕ್ಕೆ ಸೇರಿದ ನಂ. (41) 52, 2ನೇ ಅಡ್ಡರಸ್ತೆ, ಎನ್.ಆರ್. ಕಾಲೋನಿ, ಬಸವನಗುಡಿ, ಬೆಂಗಳೂರು–19 ಇಲ್ಲಿನ ಖಾಸಗಿ ಕಟ್ಟಡವು ಕಛೇರಿ ಕಾರ್ಯನಿರ್ವಹಿಸಲು ಸೂಕ್ತವಾಗಿರುವುದಾಗಿ ಜಿಲ್ಲಾ ನೋಂದಣಾಧಿಕಾರಿಗಳು, ಬಸವನಗುಡಿ ನೋಂದಣಿ ಜಿಲ್ಲೆ ಇವರು ಶಿಫಾರಸ್ಸು ಮಾಡಿದ್ದು, ಸದರಿ ಕಛೇರಿಯನ್ನು ದಿನಾಂಕ:1.3.2008 ರಿಂದ ಸ್ವಾಧೀನಕ್ಕೆ ಪಡೆದು ಕಛೇರಿ ಕಾರ್ಯಗಳಿಗೆ ಉಪಯೋಗಿಸಲಾಗಿದೆ.

ಸದರಿ ಕಛೇರಿಗೆ ಸಂಬಂಧಿಸಿದಂತೆ ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ ಇವರು ಚ.ಅಡಿಗೆ ರೂ. 11.76/–ರಂತೆ 1955.76 ಚ.ಅಡಿಗಳಿಗೆ ರೂ. 23,000/–ಬಾಡಿಗೆ ನಿಗಧಿಪಡಿಸಿ, ಬಾಡಿಗೆ ದೃಢೀಕರಣ ಪತ್ರ ನೀಡಿರುತ್ತಾರೆ. ಆದರೆ ಸದರಿ ಕಟ್ಟಡದ ಮಾಲೀಕರು ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ ಇವರು ನಿಗಧಿಪಡಿಸಿರುವ ಬಾಡಿಗೆ ತುಂಬಾ ಕಡಿಮೆ ಇರುವುದೆಂದು ಅದನ್ನು ಪರಿಷ್ಕರಿಸಲು ಕೋರಿರುವ ಹಿನ್ನೆಲೆಯಲ್ಲಿ ಉಪ ನೋಂದಣಾಧಿಕಾರಿಗಳು ಲೋಕೋಪಯೋಗಿ ಇಲಾಖೆ ಇವರಿಗೆ ಪರಿಷ್ಕೃತ ಬಾಡಿಗೆ ನಿರ್ಧರಿಸುವಂತೆ ಕೋರಿದ್ದು, ಅದರಂತೆ ಲೋಕೋಪಯೋಗಿ ಇಲಾಖೆಯವರು ಪ್ರತಿ ತಿಂಗಳ ಬಾಡಿಗೆ ರೂ. 24,450/– ಗಳಾಗುತ್ತದೆಂದು ದೃಢೀಕರಣ ನೀಡಿರುತ್ತಾರೆ. ಆದ್ದರಿಂದ ದಿನಾಂಕ:1.3.2008 ರಿಂದ ಜಾರಿಗೆ ಬರುವಂತೆ ಸದರಿ ಕಟ್ಟಡಕ್ಕೆ ಮಾಸಿಕ ರೂ. 24,450/– ಬಾಡಿಗೆ ನಿಗಧಿಪಡಿಸಿ ಹಾಗೂ ಸದರಿ ವೆಚ್ಚವನ್ನು 2008–09ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 2030–03–001–071ರಲ್ಲಿ ಈಗಾಗಲೇ ಇತರೆ ಕಟ್ಟಡಗಳಿಗೆ ಭರಿಸುವ ರೀತ್ಯಾ ವೆಚ್ಚ ಭರಿಸಬೇಕಾಗಿದ್ದು, ಅದರಂತೆ ಸೂಕ್ತ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಮೇಲಿನ ವಿವರಗಳ ಹಿನ್ನೆಲೆಯಲ್ಲಿ, ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 340 ಮುನೋಮು 2008, ಬೆಂಗಳೂರು, ದಿನಾಂಕ:24ನೇ ಮಾರ್ಚ್ 2009**

ಬಸವನಗುಡಿ ಉಪ ನೋಂದಣಿ ಕಛೇರಿಯ ಕಾರ್ಯವನ್ನು ನಡೆಸಲು ಶ್ರೀ ಧೀರೇಂದ್ರ ಎಸ್.ಎ. ಬಸವನಗುಡಿ ಇವರ ಖಾಸಗಿ ಒಡೆತನದ ನಂ. (41) 52, 2ನೇ ಅಡ್ಡರಸ್ತೆ, ಎನ್.ಆರ್. ಕಾಲೋನಿ, ಬಸವನಗುಡಿ ಬೆಂಗಳೂರು–19 ಇಲ್ಲಿನ ಕಟ್ಟಡದ ಒಟ್ಟು 1955. 76ಚದರ ಅಡಿಯ ವಿಸ್ತೀರ್ಣದ ಕಟ್ಟಡಕ್ಕೆ ಲೋಕೋಪಯೋಗಿ ಇಲಾಖೆಯು ನಿಗಧಿಪಡಿಸಿರುವಂತೆ ಮಾಸಿಕ ಬಾಡಿಗೆ ರೂ. 24,450/– ಗಳನ್ನು (ಇಪ್ಪತ್ನಾಲ್ಕು ಸಾವಿರದ ನಾನೂರಾ ಐವತ್ತು ರೂಪಾಯಿಗಳು ಮಾತ್ರ) ನೀಡಲು ಸರ್ಕಾರವು ಅನುಮತಿ ನೀಡಿದೆ.

ಈ ವೆಚ್ಚವನ್ನು 'ಲೆಕ್ಕ ಶೀರ್ಷಿಕೆ 2030=03–001–071' ರಲ್ಲಿ ಭರಿಸಲು ಅನುಮತಿ ನೀಡಲಾಗಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ:ಕಂಇ 12992 ಐಎಫ್ಎ 09, ದಿನಾಂಕ:16.3.2009ರಲ್ಲಿ ನೀಡಿರುವ ಸಹಮತಿ ಹಾಗೂ ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 1996 ದಿನಾಂಕ:10.7.1996 ರನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1104

**ಟಿ.ಕೆ. ರಾಮಚಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ),

## ENERGY SECRETARIAT

## CORRIGENDUM

**No EN 391 NCE 2008, Bangalore, Dated:31st March, 2009**

**Sub:** Sanction of interest free loans to ESCOMs towards purchase of power including Co-generation and Bio-mass units-Reg.

**Ref:** G.O.No. EN 391 NCE 2008 dated:11th March 2009,

The first para of the order portion in G.O.No. EN 391 NCE 2008 dated 11th March 2009 shall be substituted by the following:

''In the circumstances explained above, Government is pleased to release an amount of Rs .150 crores (Rupees One hundred fifty crores only) as interest free loan to the Karnataka Power Transmission Corporation Limited (KPTCL) towards purchase of power including Co-generation & Bio-mass units by Electricity Supply Companies (Escoms)under the head of account ''6801-00-800-1-01-294 Loans (Non –plan)''.

By order and in the name of the Governor of Karnataka

**S.J. SAMPATH KUMAR**

P.R. 1426

Under Secretary to Government

Energy Department

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ವನ್ಯ ಜೀವಿ ಪಶುವೈದ್ಯ ಔಷಧಿ ಘಟಕ ಸ್ಥಾಪಿಸುವ ಬಗ್ಗೆ.

**ಓದಲಾಗಿದೆ :** 1 ಕುಲಪತಿಗಳು, ಕರ್ನಾಟಕ ಪಶುವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ ಬೀದರ ಇವರ ಪತ್ರ ಸಂಖ್ಯೆ: VC/KVAFSU/IWVM2007 ದಿನಾಂಕ:2.3.2007.

2. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು (ವನ್ಯಜೀವಿ) ಇವರ ಪತ್ರ ಸಂಖ್ಯೆ ಬಿ/ಡಬ್ಲ್ಯೂಎಲ್/ಸಿಆರ್–58/2008–09 ದಿನಾಂಕ:5.1.2009.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಕುಲಪತಿಗಳು ಕರ್ನಾಟಕ ಪಶುವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ ಬೀದರ ಇವರು ಪ್ರಧಾನ ಕಾರ್ಯದರ್ಶಿಗಳು, ಪಶು ಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ ಇವರಿಗೆ ಬರೆದ ಪತ್ರದಲ್ಲಿ ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕಿನ ಚಕ್ರನಗರದಲ್ಲಿ ವನ್ಯಜೀವಿ ಪಶುವೈದ್ಯ ಔಷಧಿ ಘಟಕ ಸ್ಥಾಪಿಸಲು ಯೋಜನಾ ವರದಿ ಸಿದ್ದಪಡಿಸಿ ಪ್ರಸ್ತಾವನೆ ಸಲ್ಲಿಸಿದ್ದರ ಮೇರೆಗೆ ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ), ಇವರು ಪ್ರಸ್ತಾವನೆ ಕುರಿತಂತೆ ಪರಿಶೀಲಿಸಲು ಈ ಕೆಳಗಿನಂತೆ ಒಂದು ಸಮಿತಿಯನ್ನು ರಚಿಸಲು ಕೋರಿರುತ್ತಾರೆ.

| | | |
|---|---|---|
| 1 | ಸರ್ಕಾರದ ಕಾರ್ಯದರ್ಶಿಗಳು (ಅರಣ್ಯ) | ಅಧ್ಯಕ್ಷರು |
| 2 | ನಿರ್ದೇಶಕರು ಪಶು ಸಂಗೋಪನಾ ಇಲಾಖೆ | ಸದಸ್ಯರು |
| 3 | ನಿರ್ದೇಶಕರು ಮೀನುಗಾರಿಕೆ ಇಲಾಖೆ | ಸದಸ್ಯರು |
| 4 | ನಿರ್ದೇಶಕರು ಪಶು ವೈದ್ಯ ನಿರ್ದೇಶನಾಲಯ ಹಾಗೂ ಭಾರತೀಯ ಪಶುವೈದ್ಯ ಸಂಶೋಧಾನಾ ಸಂಸ್ಥೆ | ಸದಸ್ಯರು |
| 5 | ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ) | ಸದಸ್ಯ ಕಾರ್ಯದರ್ಶಿ |

ಆದ್ದರಿಂದ ಈ ಕೆಳಗಿನಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಅಪಜೀ 133 ಎಫ್‌ಡಬ್ಲ್ಯೂಎಲ್ 2007, ಬೆಂಗಳೂರು, ದಿನಾಂಕ:1ನೇ ಏಪ್ರಿಲ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕಿನ ಚಕ್ರನಗರ ಎಂಬಲ್ಲಿ ವನ್ಯಜೀವಿ ಪಶುವೈದ್ಯ ಔಷಧಿ ಘಟಕ ಸ್ಥಾಪಿಸುವ ಬಗ್ಗೆ ಕರ್ನಾಟಕ ಪಶುವೈದ್ಯಕೀಯ ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯದ ಕುಲಪತಿಯವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಲು ಈ ಕೆಳಕಂಡಂತೆ ಸಮಿತಿಯನ್ನು ರಚಿಸಲಾಗಿದೆ:

| | | |
|---|---|---|
| 1 | ಸರ್ಕಾರದ ಕಾರ್ಯದರ್ಶಿಗಳು (ಅರಣ್ಯ) | ಅಧ್ಯಕ್ಷರು |
| 2 | ನಿರ್ದೇಶಕರು ಪಶು ಸಂಗೋಪನಾ ಇಲಾಖೆ | ಸದಸ್ಯರು |
| 3 | ನಿರ್ದೇಶಕರು ಮೀನುಗಾರಿಕೆ ಇಲಾಖೆ | ಸದಸ್ಯರು |
| 4 | ನಿರ್ದೇಶಕರು ಪಶು ವೈದ್ಯ ನಿರ್ದೇಶನಾಲಯ ಹಾಗೂ ಭಾರತೀಯ ಪಶುವೈದ್ಯ ಸಂಶೋಧಾನಾ ಸಂಸ್ಥೆ | ಸದಸ್ಯರು |
| 5 | ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ) | ಸದಸ್ಯ ಕಾರ್ಯದರ್ಶಿ |

ಸದರಿ ಸಮಿತಿಯು ಪ್ರಸ್ತಾವನೆಯನ್ನು ಪರಿಶೀಲಿಸಿ ಮೂರು ತಿಂಗಳೊಳಗಾಗಿ ಸರ್ಕಾರಕ್ಕೆ ವರದಿಯನ್ನು ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1109

**ಎಸ್.ಪಿ. ಪಾಟೀಲ**

ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರ)

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

## ಕಾರ್ಮಿಕ ಸಚಿವಾಲಯ

**ವಿಷಯ :** ಶ್ರೀ ಎಸ್.ಸಿ. ರಾಮಚಂದ್ರ, ಕಾರ್ಮಿಕ ಅಧಿಕಾರಿ, ಇವರು ಕಡ್ಡಾಯ ನಿರೀಕ್ಷಣೆಯಲ್ಲಿದ್ದ ಕಾರಣ ದಿನಾಂಕ:5.9.2007ರಿಂದ 2.10.2007ರ ವರೆಗಿನ ಅವಧಿಯನ್ನು ಕಡ್ಡಾಯ ನಿರೀಕ್ಷಣಾ ಅವಧಿಯೆಂದು ಪರಿಗಣಿಸುವ ಬಗ್ಗೆ– ಸರ್ಕಾರದ ಮಂಜೂರಾತಿ ಆದೇಶ.

**ಓದಲಾಗಿದೆ :** 1 ಸರ್ಕಾರದ ಅಧಿಸೂಚನೆ ಸಂಖ್ಯೆ:ಕಾಇ 109 ಎಲ್‌ಇಟಿ 2007, ದಿನಾಂಕ:30.8.2007.

2. ಸರ್ಕಾರದ ಅಧಿಸೂಚನೆ ಸಂಖ್ಯೆ:ಕಾಇ 246 ಎಲ್‌ಇಟಿ 2007, ದಿನಾಂಕ:4.9.2007.

3 ಕಾರ್ಮಿಕ ಆಯುಕ್ತರು, ಬೆಂಗಳೂರು ಇವರ ಪತ್ರ ಸಂಖ್ಯೆ:ಜಿಜಡ್‌ಟಿ/ಸಿಆರ್–87/2007–08, ದಿನಾಂಕ:4.12.2007.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆ ದಿನಾಂಕ:30.8.2007ರಲ್ಲಿ ಮಂಗಳೂರಿನಲ್ಲಿ ಕಾರ್ಮಿಕ ಅಧಿಕಾರಿಯಾಗಿ ಕೆಲಸ ನಿರ್ವಹಿಸುತ್ತಿದ್ದ ಶ್ರೀ ಎಸ್.ಸಿ. ರಾಮಚಂದ್ರ ಇವರನ್ನು ದಾವಣಗೆರೆಗೆ ವರ್ಗಾವಣೆ ಮಾಡಲಾಗಿದೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆ ದಿನಾಂಕ:4.9.2007ರಲ್ಲಿ ಶ್ರೀ ಎಸ್. ವಿಜಯ ಕುಮಾರ್, ಕಾರ್ಮಿಕ ಅಧಿಕಾರಿ, ಶಿವಮೊಗ್ಗ ಇವರನ್ನು ದಾವಣಗೆರೆಗೆ ಮತ್ತು ಶ್ರೀ ಎಸ್.ಸಿ. ರಾಮಚಂದ್ರ ಇವರನ್ನು ಶ್ರೀ ಎಸ್. ವಿಜಯಕುಮಾರ್, ಕಾರ್ಮಿಕ ಅಧಿಕಾರಿ, ಶಿವಮೊಗ್ಗ ಇವರ ಜಾಗಕ್ಕೆ ವರ್ಗಾವಣೆ ಮಾಡಿ ಆದೇಶಿಸಿದೆ.

ಸದರಿ ಅಧಿಸೂಚನೆಯ ವಿರುದ್ಧ ಶ್ರೀ ಎಸ್.ಸಿ. ರಾಮಚಂದ್ರ ಇವರು ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಅರ್ಜಿ ಸಂಖ್ಯೆ:4239/2007ನ್ನು ಸಲ್ಲಿಸಿದ್ದು, ನ್ಯಾಯ ಮಂಡಳಿಯ ದಿನಾಂಕ:7.9.2007ರ ಆದೇಶದ ಅನುಸಾರವಾಗಿ ಅರ್ಜಿದಾರರು ದಿನಾಂಕ:11.9.2007ರಂದು ಇಲಾಖಾ ವೃಂದ ನಿರ್ವಹಣಾ ಪ್ರಾಧಿಕಾರದ ಮುಂದೆ ಅರ್ಜಿ ಸಲ್ಲಿಸಿರುತ್ತಾರೆ. ದಿನಾಂಕ:22.9.2007ರಂದು ನಡೆದ ಇಲಾಖಾ ವೃಂದ ನಿರ್ವಹಣಾ ಪ್ರಾಧಿಕಾರದ ಸಭೆಯಲ್ಲಿ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ, ಕರ್ನಾಟಕ ಆಡಳಿತ ನ್ಯಾಯಮಂಡಳಿಯ ತಡೆಯಾಜ್ಞೆ ಇರುವುದರಿಂದ, ಶ್ರೀ ಎಸ್.ಸಿ. ರಾಮಚಂದ್ರರವರನ್ನು ದಾವಣಗೆರೆಯಲ್ಲೇ ಹಾಗೂ ಶ್ರೀ ಎಸ್. ವಿಜಯಕುಮಾರ್ ರವರನ್ನು ಶಿವಮೊಗ್ಗದಲ್ಲೇ ಮುಂದುವರೆಸಬೇಕಾಗುತ್ತದೆ. ಆದರೆ, ದಾವಣಗೆರೆಯ ಜಿಲ್ಲಾಧಿಕಾರಿಯವರು, ಶ್ರೀ ಎಸ್. ವಿಜಯಕುಮಾರ್ ರವರನ್ನು ಮಹಾನಗರ ಪಾಲಿಕೆಯ ಚುನಾವಣಾ ಕಾರ್ಯಕ್ಕೆ ನಿಯೋಜಿಸಿರುವುದರಿಂದ ಅವರನ್ನು ಶಿವಮೊಗ್ಗಕ್ಕೆ ಹಿಂತಿರುಗಿ ಕಳುಹಿಸುವ ಬಗ್ಗೆ ರಾಜ್ಯ ಚುನಾವಣಾ ಆಯೋಗದ ಮುಖ್ಯ ಚುನಾವಣಾ ಆಯುಕ್ತರನ್ನು ದಿನಾಂಕ:12.9.2007 ರಂದು ಸ್ಪಷ್ಟೀಕರಣ ಕೇಳಲಾಯಿತು ಹಾಗೂ ಅವರು ನೀಡಿದ ಸ್ಪಷ್ಟೀಕರಣದ ಅನ್ವಯ, ಶ್ರೀ ಎಸ್.ಸಿ. ರಾಮಚಂದ್ರರವರು ದಿನಾಂಕ:1.10.2007ರ ನಂತರ ದಾವಣಗೆರೆಯ ಕಾರ್ಮಿಕ ಅಧಿಕಾರಿ ಕರ್ತವ್ಯವನ್ನು ವಹಿಸಿಕೊಳ್ಳುವಂತೆ ಹಾಗೂ ಶ್ರೀ ಎಸ್. ವಿಜಯಕುಮಾರ್ ರವರು ದಿನಾಂಕ:1.10.2007ರ ನಂತರ ಶಿವಮೊಗ್ಗಕ್ಕೆ ಹಿಂತೆರಳಲು ಕಾರ್ಮಿಕ ಆಯುಕ್ತರು ತಮ್ಮ ಕಛೇರಿಯ ದಿನಾಂಕ:18.9.2007ರ ಹಿಂಬರಹದಲ್ಲಿ ಸೂಚಿಸಿರುತ್ತಾರೆ.

ಶ್ರೀ ಎಸ್.ಸಿ. ರಾಮಚಂದ್ರ ಇವರು ಕಡ್ಡಾಯ ನಿರೀಕ್ಷಣೆಯಲ್ಲಿದ್ದ ಕಾರಣ, ದಿನಾಂಕ:5.9.2007 ರಿಂದ 2.10.2007ರ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1957ರ ನಿಯಮ 8(15)(f) ರಲ್ಲಿ ನೀಡಿರುವ ಅವಕಾಶದಂತೆ 'Duty Period ಅಥವಾ 'Compulsory Waiting Period' ಎಂದು ಪರಿಗಣಿಸಿ ಸರ್ಕಾರದ ಆದೇಶವನ್ನು ಹೊರಡಿಸುವಂತೆ ಕಾರ್ಮಿಕ ಆಯುಕ್ತರು ಕೋರಿರುತ್ತಾರೆ.

ಈ ವಿಷಯವನ್ನು ಸರ್ಕಾರವು ಪರಿಶೀಲಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಕಾಇ 337 ಎಲ್‌ಇಟಿ 2007, ಬೆಂಗಳೂರು, ದಿನಾಂಕ:30ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಶ್ರೀ ಎಸ್.ಸಿ. ರಾಮಚಂದ್ರ, ಕಾರ್ಮಿಕ ಅಧಿಕಾರಿ, ಇವರ ದಿನಾಂಕ:5.9.2007 ರಿಂದ 2.10.2007ರ ವರೆಗಿನ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1957ರ ನಿಯಮ 8(15)( f) ರ ಪ್ರಕಾರ ಕಡ್ಡಾಯ ನಿರೀಕ್ಷಣಾ ಅವಧಿಯೆಂದು ಪರಿಗಣಿಸಿ ಆದೇಶಿಸಲಾಗಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಅನಧಿಕೃತ ಟಿಪ್ಪಣಿ ಸಂಖ್ಯೆ:ಸಕಕಾ 154 ಆಂಆಸ 2008, ದಿನಾಂಕ:6.2.2009ರ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1110

**ಯು.ಎನ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಾರ್ಮಿಕ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ತಾತ್ಕಾಲಿಕ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :** 1 ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 267 ಸಆಸೇ 2008, ದಿನಾಂಕ:9–7–2008 ಮತ್ತು ಸಮಸಂಖ್ಯೆಯ ತಿದ್ದೋಲೆ ದಿನಾಂಕ:29.7.2008.

2. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ ಇವರ ಪತ್ರ ಸಂಖ್ಯೆ:ಐಟಿಡಿ 16 ಡಿಐಎಸ್ 2009, ದಿನಾಂಕ:2.3.2009.

ಪ್ರಸ್ತಾವನೆ:

ಮೇಲೆ (1)ರಲ್ಲಿ ಓದಲಾದ ದಿನಾಂಕ:9.7.2008ರ ಸರ್ಕಾರಿ ಆದೇಶ ಹಾಗೂ ತಿದ್ದೋಲೆ ದಿನಾಂಕ:29.7.2008ರಲ್ಲಿ ಕರ್ನಾಟಕ ಸರ್ಕಾರದ ಸಚಿವಾಲಯದ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ:1.4.2008ರಿಂದ ಒಂದು ವರ್ಷದವರೆಗೆ ತಾತ್ಕಾಲಿಕವಾಗಿ ಮುಂದುವರಿಸಲಾಗಿದ್ದು, ಸದರಿ ಹುದ್ದೆಗಳನ್ನು ದಿನಾಂಕ:1.4.2009 ರಿಂದ 31.3.2010 ರವರೆಗೆ ಮುಂದುವರಿಸುವಂತೆ ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಮೂಲ ಸೌಲಭ್ಯ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳು ಕೋರಿದ್ದಾರೆ, ಅದರಂತೆ ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

| | | |
|---|---|---|
| 1 | ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ | 1 ಹುದ್ದೆ |
| 2 | ವಿಶೇಷ ಕರ್ತವ್ಯಾಧಿಕಾರಿ (ವೇತನ ಶ್ರೇಣಿ ರಹಿತ) | 1 ಹುದ್ದೆ |
| 3 | ಉಪ ಕಾರ್ಯದರ್ಶಿ | 1 ಹುದ್ದೆ |
| 4 | ಆರ್ಥಿಕ ಸಲಹೆಗಾರರು (ವೇತನ ಶ್ರೇಣಿ ರಹಿತ) | 1 ಹುದ್ದೆ |
| 5 | ಅಧೀನ ಕಾರ್ಯದರ್ಶಿ/ಶಾಖಾಧಿಕಾರಿ | 1 ಹುದ್ದೆ |
| 6 | ಶಾಖಾಧಿಕಾರಿ | 1 ಹುದ್ದೆ |
| 7 | ಪತ್ರಾಂಕಿತ ಆಪ್ತ ಸಹಾಯಕರು | 1 ಹುದ್ದೆ |
| 8 | ಹಿರಿಯ ಸಹಾಯಕರು/ಶೀಘ್ರಲಿಪಿಗಾರರು | 3 ಹುದ್ದೆಗಳು |
| 9 | ಕಿರಿಯ ಸಹಾಯಕರು | 1 ಹುದ್ದೆ |
| 10 | ದಲಾಯತ್ | 3 ಹುದ್ದೆಗಳು |
| 11 | ಚಾಲಕರು | 2 ಹುದ್ದೆಗಳು |
| | ಒಟ್ಟು | **16 ಹುದ್ದೆಗಳು** |

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 138 ಸಅಸೇ 2009, ಬೆಂಗಳೂರು, ದಿನಾಂಕ:20ನೇ ಮಾರ್ಚ್ 2009**

ಕರ್ನಾಟಕ ಸರ್ಕಾರದ ಸಚಿವಾಲಯದ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ:1.4.2009 ರಿಂದ 1 ವರ್ಷದ ಅವಧಿಯವರೆಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಿ ಆದೇಶಿಸುತ್ತದೆ.

| | | |
|---|---|---|
| 1 | ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ | 1 ಹುದ್ದೆ |
| 2 | ವಿಶೇಷ ಕರ್ತವ್ಯಾಧಿಕಾರಿ (ವೇತನ ಶ್ರೇಣಿ ರಹಿತ) | 1 ಹುದ್ದೆ |
| 3 | ಉಪ ಕಾರ್ಯದರ್ಶಿ | 1 ಹುದ್ದೆ |
| 4 | ಆರ್ಥಿಕ ಸಲಹೆಗಾರರು (ವೇತನ ಶ್ರೇಣಿ ರಹಿತ) | 1 ಹುದ್ದೆ |
| 5 | ಅಧೀನ ಕಾರ್ಯದರ್ಶಿ/ಶಾಖಾಧಿಕಾರಿ | 1 ಹುದ್ದೆ |
| 6 | ಶಾಖಾಧಿಕಾರಿ | 1 ಹುದ್ದೆ |
| 7 | ಪತ್ರಾಂಕಿತ ಆಪ್ತ ಸಹಾಯಕರು | 1 ಹುದ್ದೆ |
| 8 | ಹಿರಿಯ ಸಹಾಯಕರು/ಶೀಘ್ರಲಿಪಿಗಾರರು | 3 ಹುದ್ದೆಗಳು |
| 9 | ಕಿರಿಯ ಸಹಾಯಕರು | 1 ಹುದ್ದೆ |
| 10 | ದಲಾಯತ್ | 3 ಹುದ್ದೆಗಳು |
| 11 | ಚಾಲಕರು | 2 ಹುದ್ದೆಗಳು |
| | ಒಟ್ಟು | **16 ಹುದ್ದೆಗಳು** |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ:10.7.1996ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದ ಅನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1114

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3)

**ವಿಷಯ :** ವಿವಿಧ ವರ್ಗಗಳ ಮಾರಾಟಗಾರರ ನಮೂದಿತ ಪಟ್ಟಿಯ ಕುರಿತು.

**ಓದಲಾಗಿದೆ :** 1 ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 7 ವಿಮಅ 2006, ಬೆಂಗಳೂರು ದಿನಾಂಕ:9.1.07

2. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 74 ವಿಮಅ 2005, ಬೆಂಗಳೂರು, ದಿನಾಂಕ:5.1.09.

**ಪ್ರಸ್ತಾವನೆ:**

ರಾಜ್ಯದಲ್ಲಿರುವ ವಿವಿಧ ಸರ್ಕಾರಿ ಕಛೇರಿಗಳಲ್ಲಿ ಗಣಕೀಕರಣಕ್ಕಾಗಿ ಅವಶ್ಯವಿರುವ ಗಣಕ ಯಂತ್ರಗಳು, ಪ್ರಿಂಟರ್ ಗಳು, ಅವುಗಳ ಪೂರಕ ಸಾಧನಗಳು, ವಿವಿಧ ತಂತ್ರಾಂಶಗಳು ತಂತ್ರಾಂಶ ಸಿದ್ದಪಡಿಸುವ ನೆಟ್ ವರ್ಕಿಂಗ್, ಯು.ಪಿ.ಎಸ್. ತರಬೇತಿ, ವೆಬ್ ಡಿಸೈನಿಂಗ್, ಡೇಟಾ ಎಂಟ್ರಿ ಹಾಗೂ ವಾರ್ಷಿಕ ನಿರ್ವಹಣೆ ಮುಂತಾದ ಸಾಮಗ್ರಿ/ಸೇವೆಗಳನ್ನು ಪೂರೈಸುವುದಕ್ಕಾಗಿ ನಾನಾ ಸಂಸ್ಥೆಗಳನ್ನು ಸಂಕ್ಷಿಪ್ತಗೊಳಿಸಿ, ಮಾರಾಟಗಾರರ ಪಟ್ಟಿಗೆ (1)ರಲ್ಲಿ ಓದಲಾದ ಸರ್ಕಾರದ ಆದೇಶದ ಮೂಲಕ ಅನುಮೋದನೆ ನೀಡಲಾಗಿತ್ತು. ಸದರಿ ಪಟ್ಟಿಯಲ್ಲಿರುವ ಸಂಸ್ಥೆಗಳ ಸಿಂಧುತ್ವವು 31.12.2008ಗೆ ಕೊನೆಗೊಂಡಿರುತ್ತದೆ. 2009–2010 ನೇ ಸಾಲಿಗೆ ಹೊಸ ಪಟ್ಟಿ ಸಿದ್ದಪಡಿಸುವ ಪ್ರಕ್ರಿಯೆ ಅಂತಿಮವಾಗಿದ್ದಿಲ್ಲವಾದ್ದರಿಂದ, ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶದನ್ವಯ ಚಾಲ್ತಿಯಲ್ಲಿದ್ದ ಮಾರಾಟಗಾರರ ಪಟ್ಟಿಯ ಸಿಂಧುತ್ವವನ್ನು 31.3.2009ರವರೆಗೆ ವಿಸ್ತರಿಸಲಾಗಿತ್ತು. ಆದರೆ ಹೊಸ ಪಟ್ಟಿ ಸಿದ್ದಪಡಿಸುವ ಪ್ರಕ್ರಿಯೆ ಇನ್ನೂ ಪೂರ್ಣಗೊಂಡಿಲ್ಲವಾದ್ದರಿಂದ ಮೇಲೆ ಓದಲಾದ ಸರ್ಕಾರದ ಆದೇಶದನ್ವಯ ಚಾಲ್ತಿಯಲ್ಲಿದ್ದ ಮಾರಾಟಗಾರರ ಪಟ್ಟಿಯ ಸಿಂಧುತ್ವವನ್ನು 31.7.2009ರವರೆಗೆ ಅಥವಾ ಹೊಸ ಪಟ್ಟಿ ಸಿದ್ದಗೊಳ್ಳುವವರೆಗೆ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸುವುದು ಅವಶ್ಯವಾಗಿದೆ. ಅದರಂತೆ ಕೆಳಕಾಣಿಸಿದ ಸರ್ಕಾರದ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 74 ವಿಮಅ 2005, ಬೆಂಗಳೂರು, ದಿನಾಂಕ:31ನೇ ಮಾರ್ಚ್ 2009**

ರಾಜ್ಯದಲ್ಲಿರುವ ವಿವಿಧ ಸರ್ಕಾರಿ ಕಛೇರಿಗಳಲ್ಲಿ ಗಣಕೀಕರಣಕ್ಕಾಗಿ ಅವಶ್ಯವಿರುವ ಗಣಕ ಯಂತ್ರಗಳು, ಪ್ರಿಂಟರ್‌ಗಳು, ಅವುಗಳ ಪೂರಕ ಸಾಧನಗಳು, ವಿವಿಧ ತಂತ್ರಾಂಶಗಳು, ತಂತ್ರಾಂಶ ಸಿದ್ದಪಡಿಸುವ ನೆಟ್ ವರ್ಕಿಂಗ್, ಯು.ಪಿ.ಎಸ್. ತರಬೇತಿ, ವೆಬ್ ಡಿಸೈನಿಂಗ್, ಡೇಟಾ ಎಂಟ್ರಿ ಹಾಗೂ ವಾರ್ಷಿಕ ನಿರ್ವಹಣೆ ಮುಂತಾದ ಸಾಮಗ್ರಿ/ಸೇವೆಗಳನ್ನು ಪೂರೈಸುವುದಕ್ಕಾಗಿ ಮೇಲೆ ಓದಲಾದ ಸರ್ಕಾರದ ಆದೇಶದಲ್ಲಿನ ಸಂಸ್ಥೆಗಳ ಸಿಂಧುತ್ವವನ್ನು ದಿನಾಂಕ:31.7.2009ರವರೆಗೆ ಅಥವಾ ಹೊಸ ಪಟ್ಟಿ ಸಿದ್ದಗೊಳ್ಳುವವರೆಗೆ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1115

**ಚಂದ್ರಶೇಖರ್**

ಪೀಠಾಧಿಕಾರಿ, ಇ–ಆಡಳಿತ

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಆಸು)

## ಗ್ರಾಮೀಣಾಭಿವೃದ್ಧಿ ಮತ್ತು ಪಂ. ರಾಜ್ ಸಚಿವಾಲಯ

**ವಿಷಯ :** 2008–09ನೇ ಸಾಲಿನ ಶಾಸನಬದ್ದ ಅನುದಾನದ ನಾಲ್ಕನೇ (ಅಂತಿಮ) ತ್ರೈಮಾಸಿಕ ಕಂತನ್ನು ಗ್ರಾಮ ಪಂಚಾಯತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** 1 ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 129 ಗ್ರಾಪಂಕಾ 2002(3) ದಿನಾಂಕ:2.12.2003.

2. ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 234 ಗ್ರಾಪಂಅ 2007, ದಿನಾಂಕ:27.3.2008.

3. ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ:ಆಇ 363 ವೆಚ್ಚ–6/2008, ದಿನಾಂಕ:14.5.2008.

4. ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 168 ಗ್ರಾಪಂಅ 2008, ದಿನಾಂಕ:20.5.2008.

5. ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ:ಆಇ 112 ವೆಚ್ಚ–6/2008,. ದಿನಾಂಕ:6.8.2008.

6 ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 168 ಗ್ರಾಪಂಅ 2008, ದಿನಾಂಕ:8.8.2008.

7. ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ:ಆಇ 112 ವೆಚ್ಚ 6/2008, ದಿನಾಂಕ:2.12.2008

8. ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 168 ಗ್ರಾಪಂಅ 2008, ದಿನಾಂಕ:11.12.2008.

9. ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ:ಆಇ 363 ವೆಚ್ಚ–6/2009, ದಿನಾಂಕ:6.2.2009.

10. ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂ. ಗ್ರಾಅಪ 80 ಪಿಬಿಎಸ್ 09 ದಿನಾಂಕ:2.3.09

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರದ ಆದೇಶದಲ್ಲಿ ಗ್ರಾಮ ಪಂಚಾಯಿತಿಗಳಿಗೆ ಬಿಡುಗಡೆಯಾಗುವ ಸರ್ಕಾರದ ಅನುದಾನವನ್ನು ರಾಜ್ಯ ಹುಜೂರು ಖಜಾನೆಯಿಂದ ಪೇಯೀಸ್ ರಸೀದಿ ಮೇಲೆ ಪಡೆದು ರಾಷ್ಟ್ರೀಕೃತ ಬ್ಯಾಂಕುಗಳ ಮುಖಾಂತರ ಗ್ರಾಮ ಪಂಚಾಯಿತಿಗಳಿಗೆ ಬಿಡುಗಡೆ ಮಾಡಲು ಸರ್ಕಾರವು ಆದೇಶಿಸಿದೆ.

2008–09ನೇ ಸಾಲಿಗೆ ರಾಜ್ಯದ ಎಲ್ಲಾ ಗ್ರಾಮ ಪಂಚಾಯಿತಿಗಳಿಗೆ ಶಾಸನಬದ್ದ ಅನುದಾನವನ್ನು ಆಯವ್ಯಯ ಲೆಕ್ಕ ಶೀರ್ಷಿಕೆ 2515–00–198–1–07 (ಯೋಜನೆ) ಅಡಿ ಒಟ್ಟಾರೆ ರೂ. 34,219.61 ಲಕ್ಷಗಳನ್ನು ಒದಗಿಸಲಾಗಿದೆ. ಈ ಅನುದಾನದಿಂದ ಪ್ರತಿ ಗ್ರಾಮ ಪಂಚಾಯಿತಿಗೆ ವಾರ್ಷಿಕವಾಗಿ ತಲಾ ರೂ. 6.00 ಲಕ್ಷಗಳು ಲಭ್ಯವಾಗುತ್ತದೆ. ಈ ಸಾಲಿನ 1,2 ಮತ್ತು 3 ನೇ ತ್ರೈಮಾಸಿಕ ವೆಚ್ಚಕ್ಕಾಗಿ ಪ್ರಸ್ತಾಪಿತ ಲೆಕ್ಕ ಶೀರ್ಷಿಕೆಯಿಂದ ತಲಾ ರೂ,. 8442.00 ಲಕ್ಷಗಳನ್ನು ಬಿಡುಗಡೆ ಮಾಡಲು ಆರ್ಥಿಕ ಇಲಾಖೆಯು ಮೇಲೆ ಓದಲಾದ ಕ್ರಮ ಸಂಖ್ಯೆ (3) (5) ಮತ್ತು (7)ರಲ್ಲಿ ಸಹಮತಿ ನೀಡಿದ್ದು, ಮೇಲೆ ಓದಲಾದ ಕ್ರಮ ಸಂಖ್ಯೆ (4) (6) ಮತ್ತು (8)ರಲ್ಲಿ ತಿಳಿಸಿರುವ ಸರ್ಕಾರದ ಆದೇಶದಲ್ಲಿ ಪ್ರತಿ ಗ್ರಾಮ ಪಂಚಾಯಿತಿಗೆ ಪ್ರತಿ ಕಂತಿಗೆ ರೂ., 1.50 ಲಕ್ಷಗಳಂತೆ ಬಿಡುಗಡೆಗೊಳಿಸಿ, ಸಂಬಂಧಿಸಿದ ಜಿಲ್ಲಾ ಪಂಚಾಯಿತಿ ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳ ಮೂಲಕ ಗ್ರಾಮ ಪಂಚಾಯಿತಿಗಳಿಗೆ ವಿತರಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (9) ರ ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯು 2008–09ನೇ ಸಾಲಿನ ಶಾಸನಬದ್ದ ಅನುದಾನದ ನಾಲ್ಕನೇ (ಅಂತಿಮ) ಕಂತಾಗಿ ರೂ. 8442.00 ಲಕ್ಷಗಳನ್ನು ಬಿಡುಗಡೆ ಮಾಡಲು ಸಹಮತಿಸಿರುತ್ತದೆ. ಓದಲಾದ ಕ್ರಮ ಸಂಖ್ಯೆ:10 ರಲ್ಲಿ ಆಂತರಿಕ ಆರ್ಥಿಕ ಸಲಹೆಗಾರರು ನೀಡಿರುವ ಅಭಿಪ್ರಾಯದಲ್ಲಿ 3 ತ್ರೈಮಾಸಿಕಕ್ಕೆ ಬಿಡುಗಡೆ ಮಾಡಿರುವ ಅನುದಾನ ಹೊರತುಪಡಿಸಿ ಬಾಕಿ ಉಳಿದಿರುವ ಅನುದಾನವನ್ನು ಬಿಡುಗಡೆ ಮಾಡಲು ಹಾಗೂ ಜಿಲ್ಲಾವಾರು ಕೊರತೆ ಬೀಳುವ ಅನುದಾನವನ್ನು ಲೆಕ್ಕ ಶೀರ್ಷಿಕೆ 2515–00–198–1–07 ರ ಉಪ ಲೆಕ್ಕಶೀರ್ಷಿಕೆ 300 ಅಡಿ ಒಟ್ಟು ಜಿಲ್ಲಾ ಪಂಚಾಯತ್ (Lumpsum-ZP) ನಲ್ಲಿ ಒದಗಿಸಿಕೊಳ್ಳುವಂತೆ ಸೂಚಿಸಲಾಗಿರುವುದರಿಂದ ಸದರಿ ಅನುದಾನವನ್ನು ಪ್ರಸ್ತುತ ರಾಜ್ಯದಲ್ಲಿರುವ 5628 ಗ್ರಾಮ ಪಂಚಾಯಿತಿಗಳಿಗೆ ಮೇಲೆ ಓದಲಾದ ಕ್ರಮಸಂಖ್ಯೆ (2) ರ ಸರ್ಕಾರದ ಆದೇಶದಂತೆ, ಶೇಕಡಾ 40 ರಷ್ಟನ್ನು ಗ್ರಾಮ ಪಂಚಾಯಿತಿಗಳ ಸಿಬ್ಬಂದಿ ವೇತನ ಮತ್ತು ಶೇಕಡಾ 60 ರಷ್ಟನ್ನು ಗ್ರಾಮ ಪಂಚಾಯಿತಿಗಳ ಜನವರಿ 2009 ರಿಂದ ಮಾರ್ಚ್ 2009ರ ಅವಧಿಯ ವಿದ್ಯುತ್ ಬಿಲ್ ಪಾವತಿಸಲು ಜಿಲ್ಲಾ ಪಂಚಾಯಿತಿಗಳ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳ ಮುಖಾಂತರ ಬಿಡುಗಡೆ ಮಾಡಲು ಸರ್ಕಾರವು ನಿರ್ಧರಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 168 ಗ್ರಾಪಂಅ 2008, ಬೆಂಗಳೂರು, ದಿನಾಂಕ:5ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 2008–09ನೇ ಸಾಲಿನ ಶಾಸನಬದ್ದ ಅನುದಾನದ ನಾಲ್ಕನೇ (ಅಂತಿಮ) ತ್ರೈಮಾಸಿಕ ಕಂತಿನ ಮೊತ್ತ ರೂ. 8442.00 ಲಕ್ಷಗಳನ್ನು (ಎಂಭತ್ತನಾಲ್ಕು ಕೋಟಿ ನಲವತ್ತೆರಡು ಲಕ್ಷ ರೂಪಾಯಿಗಳು ಮಾತ್ರ) ಲೆಕ್ಕ ಶೀರ್ಷಿಕೆ 2515–00–198–1–07 (ಯೋಜನೆ) ಮತ್ತು ಸದರಿ ಲೆಕ್ಕ ಶೀರ್ಷಿಕೆಯ ಉಪಲೆಕ್ಕಶೀರ್ಷಿಕೆ 300ರ ಅಡಿಯಲ್ಲಿ ಬಿಡುಗಡೆ ಮಾಡಿ ಆದೇಶಿಸಿದೆ. ಈ ಅನುದಾನದ ಮೊತ್ತವನ್ನು ಪೇಯೀಸ್ ರಸೀದಿಯ ಮೇಲೆ ಪಡೆದು ಸಿಂಡಿಕೇಟ್ ಬ್ಯಾಂಕ್, ಬೆಂಗಳೂರು ನಗರ ನೀರು ಸರಬರಾಜು ಮಂಡಳಿ ಶಾಖೆ, ಮೈಸೂರು ಬ್ಯಾಂಕ್ ವೃತ್ತ, ಬೆಂಗಳೂರು, ಇಲ್ಲಿ ತೆರೆದಿರುವ ಖಾತೆಯ ಮುಖಾಂತರ ರಾಜ್ಯದ ಎಲ್ಲಾ ಗ್ರಾಮ ಪಂಚಾಯಿತಿಗಳಿಗೆ ತಲಾ ರೂ. 1.50 ಲಕ್ಷದಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಸರ್ಕಾರದ ಆದೇಶದಲ್ಲಿನ ಷರತ್ತುಗಳನ್ವಯ ಪಾಲಿಸುವ ನಿಬಂಧನೆಗೆ ಒಳಪಟ್ಟು ಜಿಲ್ಲಾ ಪಂಚಾಯಿತಿಗಳ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳ ಮುಖಾಂತರ ಬಿಡುಗಡೆ ಮಾಡಿ ಆದೇಶಿಸಿದೆ.

ಈ ಆದೇಶವನ್ನು ಟಿಪ್ಪಣಿ ಸಂಖ್ಯೆ:ಆಇ 363 ವೆಚ್ಚ–6/2009, ದಿನಾಂಕ:6.2.2009 ರಲ್ಲಿ ಆರ್ಥಿಕ ಇಲಾಖೆಯು ಮತ್ತು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ ಗ್ರಾಅಪ 80 ಪಿಬಿಎಸ್ 2009 ದಿನಾಂಕ:2.3.2009ರಲ್ಲಿ ನೀಡಿರುವ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1116

**ಸ್ವರ್ಣಲತ ಎಂ. ಭಂಡಾರೆ**

ಸರ್ಕಾರದ ಅಧೀನ ಕಾರ್ಯದರ್ಶಿ

ಗ್ರಾಮೀಣಾಭಿವೃದ್ದಿ ಮತ್ತು ಪಂ. ರಾಜ್ ಇಲಾಖೆ

**ತಿದ್ದುಪಡಿ**

**ಸಂಖ್ಯೆ:ಗ್ರಾಅಪ 32 ಎಸ್ ಜೆವೈ 2008, ಬೆಂಗಳೂರು, ದಿನಾಂಕ:28ನೇ ಮಾರ್ಚ್ 2009**

ಸರ್ಕಾರದ ಆದೇಶ ಸಮಸಂಖ್ಯೆ ದಿನಾಂಕ:26.3.2009ರ ಅನುಬಂಧ (ಅ) ರಲ್ಲಿ ಬೆಂಗಳೂರು ನಗರ ರೂ 2,77,000, ಗುಲ್ಬರ್ಗಾ ರೂ. 7,33,000, ಹಾವೇರಿ ರೂ. 4,14,000 ಶಿವಮೊಗ್ಗ ರೂ. 4,60,000 ಮತ್ತು ಉತ್ತರ ಕನ್ನಡ ರೂ. 14.24,000 ಗಳನ್ನು ಬಿಡುಗಡೆ ಮಾಡಲಾಗಿದ್ದರ ಬದಲಿಗೆ.

| | | |
|---|---|---|
| 1 | ಬೆಂಗಳೂರು ನಗರ | 2,76,000 |
| 2 | ಗುಲ್ಬರ್ಗಾ | 7,32,000 |
| 3 | ಹಾವೇರಿ | 4,13,000 |

| | | |
|---|---|---|
| 4 | ಶಿವಮೊಗ್ಗ | 4,59,000 |
| 5 | ಉತ್ತರ ಕನ್ನಡ | 6,45,000 |

ರೂ.ಗಳನ್ನು ಬಿಡುಗಡೆ ಮಾಡಲಾಗಿದೆ ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1117

**ಡಾ:ಶಮ್ಲಾ ಇಕ್ಬಾಲ್**
ನಿರ್ದೇಶಕರು (ಸ್ವ ಉಕಾ) ಹಾಗೂ
ಪ.ನಿ ಸರ್ಕಾರದ ಉಪ ಕಾರ್ಯದರ್ಶಿಗಳು
ಗ್ರಾಮೀಣಾಭಿವೃದ್ಧಿ ಮತ್ತು ಪಂ. ರಾಜ್ ಇಲಾಖೆ

## ಕಂದಾಯ ಸಚಿವಾಲಯ

**ವಿಷಯ :** ಶಿವಮೊಗ್ಗ ಜಿಲ್ಲೆಯಲ್ಲಿನ ತುಂಗಾ ಮೇಲ್ದಂಡೆ ಯೋಜನೆ ಮತ್ತು ದಂಡಾವತಿ ಯೋಜನೆಗಳ ಪುನರ್ವಸತಿ ಮತ್ತು ಪುನರ್ ನಿರ್ಮಾಣ ಕಾರ್ಯವನ್ನು ಸಮರ್ಪಕವಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದ ಪುನರ್ವಸತಿ ಸಲಹಾ ಸಮಿತಿಯನ್ನು ಪುನರ್ ರಚನೆ ಮಾಡುವ ಬಗ್ಗೆ

**ಓದಲಾಗಿದೆ :** 1 ಸರ್ಕಾರದ ಅಧಿಸೂಚನೆ ಸಂಖ್ಯೆ:ಕಂಇ 59 ಆರ್ ಇಹೆಚ್ 04, ದಿನಾಂಕ 2.8.2005

2. ಜಲಸಂಪನ್ಮೂಲ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಜಸಂಇ 27 ವಿಬ್ಯಾತ 2008, ದಿನಾಂಕ:5.12.2008.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಶಿವಮೊಗ್ಗ ಜಿಲ್ಲೆಯಲ್ಲಿ ಬರುವ ತುಂಗಾ ಮೇಲ್ದಂಡೆ ಮತ್ತು ದಂಡಾವತಿ ಯೋಜನೆಗಳ ಸಂತ್ರಸ್ಥರಿಗೆ ಸಂಬಂಧಿಸಿದಂತೆ ಪುನರ್ವಸತಿ ಮತ್ತು ಪುನರ್ ನಿರ್ಮಾಣ ಸೌಲಭ್ಯಗಳನ್ನು ಒದಗಿಸಲು ಜಿಲ್ಲಾ ಮಟ್ಟದ ಪುನರ್ವಸತಿ ಸಲಹಾ ಸಮಿತಿಯನ್ನು ರಚನೆ ಮಾಡಲಾಗಿದೆ.

2) ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ತುಂಗಾ ಮೇಲ್ದಂಡೆ ಯೋಜನೆಯ ಪುನರ್ವಸತಿ ಸಲಹಾ ಸಮಿತಿಯನ್ನು ಪುನರ್ ರಚಿಸುವಂತೆ ಕೋರಿ ಜಲ ಸಂಪನ್ಮೂಲ ಇಲಾಖೆಯು ಪ್ರಸ್ತಾವನೆ ಸಲ್ಲಿಸಿರುತ್ತದೆ.

3) ಪ್ರಸ್ತಾವನೆಯನ್ನು ಪರಿಶೀಲಿಸಿ ಪುನರ್ವಸತಿ ಸಲಹಾ ಸಮಿತಿಯನ್ನು ರಚಿಸುವ ಅಗತ್ಯತೆಯನ್ನು ಮನಗಂಡು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 47 ಆರ್‌ಇಹೆಚ್ 2009, ಬೆಂಗಳೂರು, ದಿನಾಂಕ:28ನೇ ಫೆಬ್ರವರಿ 2009**

ಸರ್ಕಾರವು ಶಿವಮೊಗ್ಗ ಜಿಲ್ಲೆಯಲ್ಲಿ ಬರುವ ತುಂಗಾ ಮೇಲ್ದಂಡೆ ಯೋಜನೆ ಮತ್ತು ದಂಡಾವತಿ ಯೋಜನೆಗಳ ಪುನರ್ವಸತಿ ಮತ್ತು ಪುನರ್ ನಿರ್ಮಾಣ ಕಾರ್ಯವನ್ನು ಸಮರ್ಪಕವಾಗಿ ಅನುಷ್ಠಾನಗೊಳಿಸಲು ದಿನಾಂಕ:20.8.2005 ಅಧಿಸೂಚನೆ ಸಂಖ್ಯೆ:ಕಂಇ 59 ಆರ್ ಇಹೆಚ್ 2004ರಲ್ಲಿ ರಚಿಸಲಾಗಿದ್ದ ಜಿಲ್ಲಾ ಮಟ್ಟದ ಪುನರ್ವಸತಿ ಸಲಹಾ ಸಮಿತಿಯನ್ನು ಈ ಕೆಳಕಂಡಂತೆ ಪುನರ್ ರಚನೆ ಮಾಡಿ ಆದೇಶಿಸಿದೆ.

| ಕ್ರ.ಸಂ | ಸದಸ್ಯರ ಹೆಸರು ಮತ್ತು ಅವರ ಹುದ್ದೆ<br>**ಅಧಿಕಾರೇತರ ಸದಸ್ಯರು** | ಪದನಾಮ |
|---|---|---|
| 1 | ಶ್ರೀ ಬಿ.ಎಸ್. ಯಡಿಯೂರಪ್ಪ, ಸನ್ಮಾನ್ಯ ಮುಖ್ಯ ಮಂತ್ರಿಗಳು ಹಾಗೂ ಶಾಸಕರು, ಶಿಕಾರಿಪುರ ವಿಧಾನಸಭಾ ಮತಕ್ಷೇತ್ರ | ಅಧ್ಯಕ್ಷರು |
| 2 | ಶ್ರೀ ಕೆ.ಎಸ್. ಈಶ್ವರಪ್ಪ ಮಾನ್ಯ ಇಂಧನ ಸಚಿವರು ಹಾಗೂ ಶಾಸಕರು, ಶಿವಮೊಗ್ಗ ವಿಧಾನಸಭಾ ಮತ ಕ್ಷೇತ್ರ | ಸದಸ್ಯರು |
| 3 | ಶ್ರೀ ಹೆಚ್. ಹಾಲಪ್ಪ ಮಾನ್ಯ ಆಹಾರ ಮತ್ತು ನಾಗರೀಕ ಪೂರೈಕೆ ಸಚಿವರು ಹಾಗೂ ಶಾಸಕರು, ಸೊರಬ ವಿಧಾನಸಭಾ ಮತ ಕ್ಷೇತ್ರ | ಸದಸ್ಯರು |
| 4 | ಶ್ರೀ ಎಸ್. ಬಂಗಾರಪ್ಪ ಲೋಕಸಭಾ ಸದಸ್ಯರು, ಶಿವಮೊಗ್ಗ ಲೋಕಸಭಾ ಮತ ಕ್ಷೇತ್ರ | ಸದಸ್ಯರು |
| 5 | ಲೋಕಸಭಾ ಸದಸ್ಯರು, ಚಿಕ್ಕಮಗಳೂರು ಲೋಕಸಭಾ ಮತ ಕ್ಷೇತ್ರ | ಸದಸ್ಯರು |
| 6 | ಶ್ರೀ ಬಿ.ಕೆ. ಸಂಗಮೇಶ್ವರ, ಶಾಸಕರು, ಭದ್ರಾವತಿ ವಿಧಾನಸಭಾ ಮತ ಕ್ಷೇತ್ರ | ಸದಸ್ಯರು |
| 7 | ಶ್ರೀ ಕೆ.ಜಿ. ಕುಮಾರಸ್ವಾಮಿ, ಶಾಸಕರು ಶಿವಮೊಗ್ಗ ಗ್ರಾಮೀಣ ವಿಧಾನಸಭಾ ಮತ ಕ್ಷೇತ್ರ | ಸದಸ್ಯರು |
| 8 | ಶ್ರೀ ಬಿ.ಕೆ. ಗೋಪಾಲಕೃಷ್ಣ ಬೇಳೂರು, ಶಾಸಕರು, ಸಾಗರ ವಿಧಾನಸಭಾ ಮತ ಕ್ಷೇತ್ರ | ಸದಸ್ಯರು |
| 9 | ಶ್ರೀ ಕಿಮ್ಮನೆ ರತ್ನಾಕರ, ಶಾಸಕರು, ತೀರ್ಥಹಳ್ಳಿ, ವಿಧಾನಸಭಾ ಮತ ಕ್ಷೇತ್ರ | ಸದಸ್ಯರು |
| 10 | ಶ್ರೀ ಡಿ.ಹೆಚ್. ಶಂಕರಮೂರ್ತಿ, ವಿಧಾನಪರಿಷತ್ ಸದಸ್ಯರು | ಸದಸ್ಯರು |

| | | |
|---|---|---|
| 11 | ಶ್ರೀ ಅಜೀಜ್ ಅಹ್ಮದ್, ವಿಧಾನಪರಿಷತ್ ಸದಸ್ಯರು | ಸದಸ್ಯರು |
| | **ಅಧಿಕಾರಿ ಸದಸ್ಯರು** | |
| 12 | ಮುಖ್ಯ ಅಭಿಯಂತರರು, ತುಂಗಾ ಮೇಲ್ದಂಡೆ ಯೋಜನಾವಲಯ, ಶಿವಮೊಗ್ಗ | ಸದಸ್ಯರು |
| 13 | ಉಪ ಅರಣ್ಯ ಸಂರಕ್ಷಣಾಧಿಕಾರಿ, ಶಿವಮೊಗ್ಗ ಜಿಲ್ಲೆ | ಸದಸ್ಯರು |
| 14 | ಕಾರ್ಯನಿರ್ವಾಹಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಶಿವಮೊಗ್ಗ | ಸದಸ್ಯರು |
| 15 | ಕಾರ್ಯನಿರ್ವಾಹಕ ಅಭಿಯಂತರರು, ಕರ್ನಾಟಕ ವಿದ್ಯುತ್ ವಿತರಣಾ ನಿಗಮ ನಿಯಮಿತ ಶಿವಮೊಗ್ಗ | ಸದಸ್ಯರು |
| 16 | ಉಪ ವಿಭಾಗಾಧಿಕಾರಿ, ಶಿವಮೊಗ್ಗ | ಸದಸ್ಯರು |
| 17 | ಉಪ ನಿರ್ದೇಶಕರು, ಕೃಷಿ ಇಲಾಖೆ, ಶಿವಮೊಗ್ಗ | ಸದಸ್ಯರು |
| 18 | ವಿಶೇಷ ಭೂ ಸ್ವಾಧೀನಾಧಿಕಾರಿ, ತುಂಗಾ ಮೇಲ್ದಂಡೆ ಯೋಜನೆ, ಶಿವಮೊಗ್ಗ | ಸದಸ್ಯರು |
| 19 | ತಹಶೀಲ್ದಾರ ತೀರ್ಥಹಳ್ಳಿ | ಸದಸ್ಯರು |
| 20 | ತಹಶೀಲ್ದಾರ, ಸೊರಬ | ಸದಸ್ಯರು |
| 21 | ಜಿಲ್ಲಾಧಿಕಾರಿ, ಶಿವಮೊಗ್ಗ ಜಿಲ್ಲೆ | ಸದಸ್ಯ ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1119

**ಎಂ. ವೆಂಕಟೇಶಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಭೂಸ್ವಾ–2 ಮತ್ತು ಪುನರ್ವಸತಿ)

**ವಿಷಯ :** ಕೂಡಲ ಸಂಗಮ ಅಭಿವೃದ್ಧಿ ಮಂಡಳಿಯ 2007–08ರ ವಾಸ್ತವಿಕ ಆಯವ್ಯಯ ಪತ್ರ ಮತ್ತು 2008–09ನೇ ಸಾಲಿನ ಅಂದಾಜು ಆಯವ್ಯಯ ಪತ್ರಕ್ಕೆ ಸರ್ಕಾರದ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಕೂಡಲ ಸಂಗಮ ಅಭಿವೃದ್ಧಿ ಮಂಡಳಿ ಇವರ ಪತ್ರ ಸಂಖ್ಯೆ:ಆ/ಕೂಸಅಮ/ಆಯವ್ಯಯ/2008–09/463, ದಿನಾಂಕ:31.1.2009 ಇದರೊಂದಿಗೆ ಅಂತ್ಯಗೊಂಡ ಪತ್ರ ವ್ಯವಹಾರ .

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ:31.1.2009ರ ಪತ್ರದಲ್ಲಿ ಆಯುಕ್ತರು, ಕೂಡಲ ಸಂಗಮ ಅಭಿವೃದ್ಧಿ ಮಂಡಳಿ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪ್ರಸ್ತಾವನೆಯಲ್ಲಿ ಕೂಡಲ ಸಂಗಮ ಅಭಿವೃದ್ಧಿ ಮಂಡಳಿಯ 2007–08ರ ವಾಸ್ತವಿಕ ಆಯವ್ಯಯ ಪತ್ರ ಮತ್ತು 2008–09ನೇ ಸಾಲಿನ ಅಂದಾಜು ಆಯವ್ಯಯ ಪತ್ರಗಳಿಗೆ ಸರ್ಕಾರದ ಅನುಮೋದನೆ ಕೋರಿರುತ್ತಾರೆ. ಪ್ರಸ್ತಾವನೆಯ ವಿವರಗಳು ಈ ಕೆಳಕಂಡಂತಿವೆ.

ಕೂಡಲ ಸಂಗಮ ಅಭಿವೃದ್ಧಿ ಮಂಡಳಿಯ 2007–08ನೇ ಸಾಲಿನ ಆಯವ್ಯಯ (ವಾಸ್ತವಿಕ)

(ರೂಪಾಯಿ ಲಕ್ಷಗಳಲ್ಲಿ)

| ಕ್ರ.ಸಂ | ವಿವರಗಳು | ಪ್ರಾರಂಭದ ಶಿಲ್ಕು | ಆದಾಯ | ಒಟ್ಟು | ವೆಚ್ಚ | ಉಳಿತಾಯ |
|---|---|---|---|---|---|---|
| 1 | ಶ್ರೀ ಕೂಡಲ ಸಂಗಮೇಶ್ವರ ದೇವಸ್ಥಾನ ಖಾತೆ | 133.75 | 97.18 | 230.93 | 68.96 | 161.97 |
| 2 | ಶ್ರೀ ಬಸವೇಶ್ವರ ದೇವಸ್ಥಾನ, ಬಸವನಬಾಗೇವಾಡಿ ಖಾತೆ | 44.87 | 35.37 | 80.24 | 31.98 | 48.26 |
| 3 | ಕಾಮಗಾರಿಗಳ ಖಾತೆ | 429.00 | 797.01 | 1226.01 | 247.62 | 978.39 |
| 4 | ಸಿಬ್ಬಂದಿ ಖಾತೆ | 28.34 | 24.20 | 52.54 | 18.70 | 33.84 |
| | ಒಟ್ಟು | 635.96 | 953.76 | 1589.72 | 367.26 | 1222.46 |

ಕೂಡಲ ಸಂಗಮ ಅಭಿವೃದ್ಧಿ ಮಂಡಳಿಯ 2008–09ನೇ ಸಾಲಿನ ಆಯವ್ಯಯ (ಅಂದಾಜು)

(ರೂಪಾಯಿ ಲಕ್ಷಗಳಲ್ಲಿ)

| ಕ್ರ.ಸಂ | ವಿವರಗಳು | ಪ್ರಾರಂಭದ ಶಿಲ್ಕು | ಆದಾಯ | ಒಟ್ಟು | ವೆಚ್ಚ | ಉಳಿತಾಯ |
|---|---|---|---|---|---|---|
| 1 | ಶ್ರೀ ಕೂಡಲ ಸಂಗಮೇಶ್ವರ ದೇವಸ್ಥಾನ ಖಾತೆ | 161.97 | 102.01 | 263.98 | 98.25 | 165.73 |
| 2 | ಶ್ರೀ ಬಸವೇಶ್ವರ ದೇವಸ್ಥಾನ, ಬಸವನಬಾಗೇವಾಡಿ ಖಾತೆ | 48.26 | 44.64 | 92.90 | 46.53 | 46.37 |
| 3 | ಕಾಮಗಾರಿಗಳ ಖಾತೆ | 978.39 | 118.80 | 1097.19 | 846.39 | 250.80 |
| 4 | ಸಿಬ್ಬಂದಿ ಖಾತೆ | 33.84 | 24.73 | 58.57 | 37.62 | 20.95 |
| | ಒಟ್ಟು | 1222.46 | 290.18 | 1512.64 | 1028.79 | 483.85 |

2) ಕೂಡಲ ಸಂಗಮ ಅಭಿವೃದ್ಧಿ ಮಂಡಳಿ ಅಧಿನಿಯಮ, 1994ರ ಕಲಂ 26 (1) ಮತ್ತು (2)ರ ಪ್ರಕಾರ ಕೂಡಲ ಸಂಗಮ ಅಭಿವೃದ್ಧಿ ಮಂಡಳಿಯ ಆಯವ್ಯಯಕ್ಕೆ ಸರ್ಕಾರದ ಅನುಮೋದನೆ ಅಗತ್ಯವಿರುತ್ತದೆ.

3) ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 54 ಆರ್‌ಇಹೆಚ್ 2009, ಬೆಂಗಳೂರು, ದಿನಾಂಕ:25ನೇ ಮಾರ್ಚ್ 2009**

ಕೂಡಲ ಸಂಗಮ ಅಭಿವೃದ್ಧಿ ಮಂಡಳಿಯ ಈ ಕೆಳಕಂಡ ಆಯವ್ಯಯ ಪತ್ರಗಳಿಗೆ ಸರ್ಕಾರದ ಅನುಮೋದನೆ ನೀಡಲಾಗಿದೆ.

1) 2007–08ನೇ ಸಾಲಿಗೆ ಹಿಂದಿನ ವರ್ಷದ ಉಳಿತಾಯ ಮೊತ್ತ ರೂ. 635.96 ಲಕ್ಷ ಸೇರಿ ಒಟ್ಟಾರೆ ರೂ. 1,589. 72 ಲಕ್ಷದ ವಾಸ್ತವಿಕ ಆದಾಯ ಮತ್ತು ರೂ. 367.26 ಲಕ್ಷದ ವಾಸ್ತವಿಕ ವೆಚ್ಚದ ಆಯವ್ಯಯ ಪತ್ರ

2) 2008–09ನೇ ಸಾಲಿಗೆ ಹಿಂದಿನ ವರ್ಷದ ಉಳಿತಾಯ ರೂ., 1,222.46 ಲಕ್ಷ ಸೇರಿ ಒಟ್ಟಾರೆ ರೂ. 1512.64 ಲಕ್ಷದ ಅಂದಾಜು ಆದಾಯ ಮತ್ತು ರೂ. 1028.79 ಲಕ್ಷ ಅಂದಾಜು ವೆಚ್ಚದ ಆಯವ್ಯಯ ಪತ್ರ

2) ಈ ಆಯವ್ಯಯ ಪತ್ರಗಳಿಗೆ ನೀಡಿರುವ ಅನುಮೋದನೆಯನ್ನು ಯಾವುದೇ ವೆಚ್ಚಕ್ಕೆ ಅಥವಾ ಸ್ವೀಕೃತಿಗೆ ನೀಡಲಾಗಿರುವ ಅನುಮೋದನೆಯೆಂದು ಪರಿಗಣಿಸಬಾರದು.

3) ಮಂಡಳಿಯ ಲೆಕ್ಕಪತ್ರಗಳ ಬಗ್ಗೆ ಕೂಡಲ ಸಂಗಮ ಅಭಿವೃದ್ಧಿ ಮಂಡಳಿ ಅಧಿನಿಯಮ 1994ರ ಕಲಂ 27 ಮತ್ತು 28ರಂತೆ ಅಗತ್ಯ ಕ್ರಮ ಜರುಗಿಸುವಂತೆ ಸಹ ಆದೇಶಿಸಿದೆ.

4) ಈ ಆದೇಶವನ್ನು ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2003, ದಿನಾಂಕ:12.6.2003ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆ ರೀತ್ಯಾ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1120

**ಎಂ. ವೆಂಕಟೇಶಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಭೂಸ್ವಾ–2 ಮತ್ತು ಪುನರ್ವಸತಿ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ತಿದ್ದುಪಡಿ ಸಂಖ್ಯೆ:ಆಕುಕ 105 ಹೆಚ್‌ಎಸ್‌ಎಂ 2008 (ಭಾಗ) ಬೆಂಗಳೂರು, ದಿನಾಂಕ:3ನೇ ಏಪ್ರಿಲ್ 2009**

ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 105 ಹೆಚ್‌ಎಸ್‌ಎಂ 2008, ದಿನಾಂಕ:29.12.2008ರ ಅಧಿಸೂಚನೆಗೆ ಈ ಕೆಳಗೆ ಕಾಣಿಸಿರುವ ತಿದ್ದುಪಡಿಗಳಂತೆ ಓದಿಕೊಳ್ಳತಕ್ಕದ್ದು.

| | ಕಾಲಂನ ಕ್ರಮ ಸಂಖ್ಯೆ | ಅಧಿಸೂಚನೆಯಲ್ಲಿರುವಂತೆ | ತಿದ್ದುಪಡಿ |
|---|---|---|---|
| 1 | 18 | ಕಾಲಂ 2 ರಲ್ಲಿನ "ಎ.ಎಸ್. ಲಕ್ಷ್ಮಿಕೃಷ್ಣನ್" ಎಂದಿರುವುದನ್ನು | "ಲಕ್ಷ್ಮಿಕೃಷ್ಣನ್"ಎಂದು ಓದಿಕೊಳ್ಳತಕ್ಕದ್ದು. |

| | | | |
|---|---|---|---|
| 2 | 46 | ಕಾಲಂ 3ರಲ್ಲಿನ "ಸಾರ್ವಜನಿಕ ಆಸ್ಪತ್ರೆ ಕೊರಟಗೆರೆ, ತುಮಕೂರು" ಎಂದಿರುವುದನ್ನು | " ಸಾರ್ವಜನಿಕ ಆಸ್ಪತ್ರೆ, ಕೊರಟಗೆರೆ, ತುಮಕೂರು ಜಿಲ್ಲೆ" ಎಂದು ಓದಿಕೊಳ್ಳತಕ್ಕದ್ದು. |
| 3 | 48 | ಕಾಲಂ 3ರಲ್ಲಿನ "ಸಾರ್ವಜನಿಕ ಆಸ್ಪತ್ರೆ, ಮಧುಗಿರಿ, ಚಿಕ್ಕಬಳ್ಳಾಪುರ" ಎಂದಿರುವುದನ್ನು | "ಸಾರ್ವಜನಿಕ ಆಸ್ಪತ್ರೆ, ಮಧುಗಿರಿ ತುಮಕೂರು ಜಿಲ್ಲೆ" ಎಂದು ಓದಿಕೊಳ್ಳತಕ್ಕದ್ದು. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1121

**ಚಿಕ್ಕೇಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ_ಇಲಾಖೆ (ವೃಂದ ಮತ್ತು ನೇಮಕಾತಿ)

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ಮರಳು ಸಾಗಾಣಿಕೆಗಾಗಿ ತಾತ್ಕಾಲಿಕ ಪರವಾನಿಗೆ ಜಾರಿ ಮಾಡುವ ಬಗ್ಗೆ.

**ಓದಲಾಗಿದೆ :** 1 ಸರ್ಕಾರದ ಆದೇಶ ಸಂಖ್ಯೆ:ಸಿಐ. 05 ಎಂಎಂಎನ್ 2005 ದಿನಾಂಕ:6.8.2005.

2. ದಿನಾಂಕ:26.9.2008ರ ಆದೇಶ ಸಂಖ್ಯೆ:ಸಿಐ 142. ಎಂಎಂಎನ್. 2008.

3. ದಿನಾಂಕ:20.10.2008ರ ಸೇರ್ಪಡೆ ಸಂಖ್ಯೆ:ಸಿಐ 142. ಎಂಎಂಎನ್. 2008

4. ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಇವರ ದಿನಾಂಕ:16.3.2009ರ ಪತ್ರ ಸಂಖ್ಯೆ:ಗಭೂಇ:ಉನಿ (ಖಅ)/ ಮರಳು/2009.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ:26.9.2008ರ ಆದೇಶದಲ್ಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಜ್ಯದಲ್ಲಿ ಮರಳು ಗಣಿಗಾರಿಕೆ/ಸಾಗಾಣಿಕೆಗಾಗಿ ನೂತನವಾಗಿ ನಿಯಮಾವಳಿಗಳನ್ನು ರೂಪಿಸಲು ಬೇಕಾಗುವ ಸಮಯ ಅಥವಾ ಆದೇಶದ ದಿನಾಂಕದಿಂದ 6 ತಿಂಗಳ ಅವಧಿ, ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಬೃಹತ್ ಬೆಂಗಳೂರು ಮಹಾನಗರದ ಸುತ್ತಲಿನ ಜಿಲ್ಲೆಗಳಾದ ಕೋಲಾರ, ಚಿಕ್ಕಬಳ್ಳಾಪುರ, ರಾಮನಗರ, ತುಮಕೂರು, ಮೈಸೂರು, ಮಂಡ್ಯ, ಚಾಮರಾಜನಗರ, ಹಾಸನ, ಬೆಂಗಳೂರು ಗ್ರಾಮಾಂತರ ಮತ್ತು ಬೆಂಗಳೂರು ನಗರ ಜಿಲ್ಲೆಗಳಿಗೆ ಒಳಪಟ್ಟಂತೆ, ಮರಳು ಸಾಗಾಣಿಕೆಗಾಗಿ ತಾತ್ಕಾಲಿಕ ಪರವಾನಿಗೆಗಳನ್ನು, ಸದರಿ ಆದೇಶದಲ್ಲಿ ಹಾಗೂ ಮೇಲೆ (3)ರಲ್ಲಿ ಓದಲಾದ ದಿನಾಂಕ:20.11.2008ರ 'ಸೇರ್ಪಡೆ' ಯಲ್ಲಿನ ನಿಬಂಧನೆಗಳಿಗೊಳಪಟ್ಟು ಜಾರಿಗೊಳಿಸಲು ಸರ್ಕಾರವು ಆದೇಶಿಸಿತ್ತು.

ಮೇಲೆ (4)ರಲ್ಲಿ ಓದಲಾದ ದಿನಾಂಕ:16.3.2009ರ ಪತ್ರದಲ್ಲಿ, ಮರಳು ಗಣಿಗಾರಿಕೆ ಮತ್ತು ಸಾಗಾಣಿಕೆ ಬಗ್ಗೆ ನೆರೆರಾಜ್ಯಗಳಾದ ತಮಿಳುನಾಡು ಹಾಗೂ ಆಂಧ್ರಪ್ರದೇಶದಲ್ಲಿ ಚಾಲ್ತಿಯಲ್ಲಿರುವ ಮರಳು ಗಣಿಗಾರಿಕೆ ಕುರಿತಾದ ನಿಯಮಾವಳಿಗಳನ್ನು ಪರಿಶೀಲಿಸಿ ರಾಜ್ಯದಲ್ಲಿನ ನಿಯಮಾವಳಿಗಳನ್ನು ಸರಳೀಕರಿಸುವ ಉದ್ದೇಶದಿಂದ ಹಾಗೂ ಫಿಲ್ಟರ್ ಮರಳಿನ ಗಣಿಗಾರಿಕೆ ಮತ್ತು ಅಕ್ರಮ ಮರಳು ಸಾಗಾಣಿಕೆಯನ್ನು ನಿಯಂತ್ರಿಸುವ ದಿಸೆಯಲ್ಲಿ, ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸುತ್ತಾ, ಮರಳು ಸಾಗಾಣಿಕೆಗಾಗಿ ತಾತ್ಕಾಲಿಕ ಪರವಾನಿಗೆ ವ್ಯವಸ್ಥೆಯನ್ನು ಸರ್ಕಾರಿ ಆದೇಶ ಸಂಖ್ಯೆ:ಸಿಐ 142, ಎಂಎಂಎನ್ 2008 ದಿನಾಂಕ:26.9.2008ರಲ್ಲಿ 6 ತಿಂಗಳ ಅವಧಿಗೆ ಜಾರಿಮಾಡಿದ್ದು, ಸದರಿ ಅವಧಿಯು ದಿನಾಂಕ:25.3.2009ರಂದು ಮುಕ್ತಾಯಗೊಳ್ಳಲಿರುವ ಪ್ರಯುಕ್ತ ನಿಯಮಾವಳಿಗಳನ್ನು ರೂಪಿಸಲು ಬೇಕಾಗುವ ಸಮಯ ಅಥವಾ 6 ತಿಂಗಳವರೆಗೆ ಅವಧಿಯನ್ನು ವಿಸ್ತರಿಸಲು ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ ಇವರು ಕೋರಿದ್ದು, ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಐ 142 ಎಂಎಂಎನ್ 2008, ದಿನಾಂಕ:2ನೇ ಏಪ್ರಿಲ್ 2009**

ಪ್ರಸ್ತಾವನೆಯಲ್ಲಿ ವಿವರಿಸಲಾದ ಎಲ್ಲಾ ಅಂಶಗಳನ್ನು ಗಮನದಲ್ಲಿರಿಸಿಕೊಂಡು ಮರಳು ಗಣಿಗಾರಿಕೆ/ಸಾಗಾಣಿಕೆಗಾಗಿ ನೂತನವಾಗಿ ನಿಯಮಾವಳಿಗಳನ್ನು ರೂಪಿಸಲು ಬೇಕಾಗುವ ಸಮಯ ಅಥವಾ ಈ ಆದೇಶದ ದಿನಾಂಕದಿಂದ 6 ತಿಂಗಳ ಅವಧಿ, ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಬೃಹತ್ ಬೆಂಗಳೂರು ಮಹಾನಗರದ ಸುತ್ತಲಿನ ಜಿಲ್ಲೆಗಳಾದ ಕೋಲಾರ, ಚಿಕ್ಕಬಳ್ಳಾಪುರ ರಾಮನಗರ, ತುಮಕೂರು, ಮೈಸೂರು, ಮಂಡ್ಯ, ಚಾಮರಾಜನಗರ, ಹಾಸನ, ಬೆಂಗಳೂರು ಗ್ರಾಮಾಂತರ ಮತ್ತು ಬೆಂಗಳೂರು ನಗರ ಜಿಲ್ಲೆಗಳಿಗೆ ಒಳಪಟ್ಟಂತೆ ಮರಳು ಸಾಗಾಣಿಕೆಗಾಗಿ ತಾತ್ಕಾಲಿಕ ಪರವಾನಿಗೆಗಳ

ಪದ್ಧತಿಯನ್ನು ಮೇಲೆ (2), (3) ರಲ್ಲಿ ಕ್ರಮವಾಗಿ ಓದಲಾದ ದಿನಾಂಕ:26.9.2008ರ ಆದೇಶ ಹಾಗೂ ದಿನಾಂಕ:20.11.2008ರ 'ಸೇರ್ಪಡೆ' ಯಲ್ಲಿನ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ವಿಸ್ತರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1122

**ಎ.ಪಿ. ರಾಮಕೃಷ್ಣ**

ಪೀಠಾಧಿಕಾರಿ (ಗಣಿ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಒಳಾಡಳಿತ ಸಚಿವಾಲಯ

**ವಿಷಯ :** ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಹಿರಿಯ ಸರ್ಕಾರಿ ಅಭಿಯೋಜಕರು/ಸಹಾಯಕ ಅಭಿಯೋಗ ನಿರ್ದೇಶಕರು ಇವರ ಸ್ಥಾನಪನ್ನ ಅವಧಿಯನ್ನು ಘೋಷಿಸುವ ಕುರಿತು.

**ಓದಲಾಗಿದೆ :** 1 ಸರ್ಕಾರದ ಅಧಿಸೂಚನೆ ನಂ. ಒಇ 88 ಪಿಪಿಇ 2006, ದಿನಾಂಕ:24.1.2007.

2. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎನ್/ಸಿಶಾ–1/73/2008–09, ದಿನಾಂಕ:24.12.2008

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ:24.1.2007ರ ಅಧಿಸೂಚನೆಯಲ್ಲಿ ಈ ಕೆಳಕಂಡ ಅಧಿಕಾರಿಗಳಿಗೆ ಸಹಾಯಕ ಸರ್ಕಾರಿ ಅಭಿಯೋಜಕರ ವೃಂದದಿಂದ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು/ಸಹಾಯಕ ಅಭಿಯೋಗ ನಿರ್ದೇಶಕರ ವೃಂದಕ್ಕೆ ಸ್ಥಾನಪನ್ನ ಮುಂಬಡ್ತಿ ನೀಡಲಾಗಿತ್ತು.

| | | | |
|---|---|---|---|
| 1 | ಶ್ರೀ ಶಿವಣ್ಣ | 2 | ಆರ್.ಆರ್. ಕುಲಕರ್ಣಿ |
| 3 | ಎಸ್. ಪರಶಿವಮೂರ್ತಿ | 4 | ಜಿ. ಬಸವರಾಜು |
| 5 | ಆರ್.ಎಸ್. ಮಾವಿನತೋಪು | 6 | ಎಲ್.ಜೆ. ಕೋಲೇಕರ್ |
| 7 | ಎನ್. ನಾಗೇಂದ್ರಪ್ಪ | 8 | ಸಿ.ಎ. ರವೀಂದ್ರ |
| 9 | ಎಫ್.ಆರ್. ಪಾಟೀಲ್ | 10 | ಎಂ.ಎ. ತಟಗಾರ್ |
| 11 | ಕೆ.ಜಿ. ಮುಚ್ಚಂಡಿ | 12 | ಎಂ.ಹೆಚ್. ಹತ್ತರಿಕಿಹಾಳ್ |
| 13 | ಎಂ.ಹೆಚ್. ಕಬಾಡಿ | 14 | ಐ.ಎ. ಆಡಿನ್ |
| 15 | ರಾಜಗೀರ್ ಬೀರಪ್ಪ | 16 | ಹೆಚ್.ವಿ. ಕಾಳಪ್ಪನವರ್ |
| 17 | ಬಿ. ರಂಗಸ್ವಾಮಿ | 18 | ಆರ್. ಮಾರುತಿ |
| 19 | ಚಿನ್ನವೆಂಕಟರಮಣಪ್ಪ | 20 | ನಾಗರಾಜ್ |
| 21 | ಕೆ.ಜಿ. ಮೀನಾಕುಮಾರಿ | 22 | ಜಿ.ಕೆ. ಮಹುರ್ಕರ್ |

ಮೇಲೆ (2)ರಲ್ಲಿ ಓದಲಾದ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರು ದಿನಾಂಕ:24.12.2008ರ ಪತ್ರದಲ್ಲಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಸರ್ಕಾರಿ ಅಭಿಯೋಜಕರು/ ಅಭಿಯೋಗ ಉಪನಿರ್ದೇಶಕರ ವೃಂದಕ್ಕೆ ಬಡ್ತಿ ಮಾಡುವ ಸಲುವಾಗಿ ಮೇಲ್ಕಂಡ 22 ಅಧಿಕಾರಿಗಳ ಸ್ಥಾನಪನ್ನ ಅವಧಿಯನ್ನು ಘೋಷಿಸಬೇಕಿದ್ದು ಸ್ಥಾನಪನ್ನ ಅವಧಿಯಲ್ಲಿ ಅವರಿಗೆ ಸಂಬಂಧಪಟ್ಟಂತೆ ಕಾರ್ಯನಿರ್ವಹಣಾ ವರದಿಗಳಲ್ಲಿ ಯಾವುದೇ ಪ್ರತಿಕೂಲ ಷರಾ ಇಲ್ಲದೇ ಇದ್ದು, ಇವರುಗಳ ಸೇವೆಯು ಸದರಿ ಅವಧಿಯಲ್ಲಿ ತೃಪ್ತಿಕರವಾಗಿರುವುದರಿಂದ, ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 19(3)(ಸಿ) ಪ್ರಕಾರ ಸದರಿ ಅಧಿಕಾರಿಗಳ ಸ್ಥಾನಪನ್ನ ಅವಧಿ ತೃಪ್ತಿಕರವೆಂದು ಘೋಷಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 21 ಪಿಪಿಇ 2009, ಬೆಂಗಳೂರು, ದಿನಾಂಕ:2ನೇ ಏಪ್ರಿಲ್ 2009**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ, ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 19(3)(ಸಿ)ರ ಪ್ರಕಾರ ಈ ಕೆಳಕಂಡ ಹಿರಿಯ ಸರ್ಕಾರಿ ಅಭಿಯೋಜಕರು/ಸಹಾಯಕ ಅಭಿಯೋಗ ನಿರ್ದೇಶಕರುಗಳ ಅವರ ಹೆಸರಿನ ಮುಂದೆ ಅಂಕಣ (5)ರಲ್ಲಿ ನಮೂದಿಸಿರುವ ದಿನಾಂಕದಿಂದ ಸ್ಥಾನಪನ್ನ ಅವಧಿ ತೃಪ್ತಿಕರವಾಗಿದೆಯೆಂದು ಘೋಷಿಸಲಾಗಿದೆ.

| ಕ್ರ.ಸಂ | ಅಧಿಕಾರಿಯ ಹೆಸರು ಮತ್ತು ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳ ಶ್ರೀ/ಶ್ರೀಮತಿ | ಈಗಿನ ಉದ್ಯೋಗ ವೃಂದಕ್ಕೆ ವರದಿ ಮಾಡಿಕೊಂಡ ದಿನಾಂಕ | ಸ್ಥಾನಪನ್ನ ಅವಧಿ ಮುಕ್ತಾಯಗೊಂಡ ದಿನಾಂಕ | ಸ್ಥಾನಪನ್ನ ಅವಧಿಯನ್ನು ತೃಪ್ತಿಕರ ವೆಂದು ಘೋಷಣೆ ಮಾಡಿದ ದಿನಾಂಕ |
|---|---|---|---|---|
| 1 | ಶಿವಣ್ಣ ಸಹಾಯಕ ಅಭಿಯೋಗ ನಿರ್ದೇಶಕರು, ಎಸ್.ಪಿ. ಕಛೇರಿ ಮಂಡ್ಯ | 15.2.2007 ಪೂರ್ವಹ್ನ | 14.2.2008 | 15.2.2008 |
| 2 | ಆರ್.ಆರ್. ಕುಲಕರ್ಣಿ, ಸಹಾಯಕ ಅಭಿಯೋಗ, ನಿರ್ದೇಶಕರು, ಅಭಿಯೋಗ ಉಪನಿರ್ದೇಶಕರ ಕಛೇರಿ, ಬೆಂಗಳೂರು ನಗರ, ಬೆಂಗಳೂರು | 9.3.2007 ಅಪರಾಹ್ನ | 9.3.2008 | 10.3.2008 |
| 3 | ಎಸ್. ಪರಶಿವಮೂರ್ತಿ, ಸಹಾಯಕ ಅಭಿಯೋಗ, ನಿರ್ದೇಶಕರು, ಆರಕ್ಷಕ ಆಯುಕ್ತರ ಕಛೇರಿ, ಬೆಂಗಳೂರು ನಗರ, | 15.2.2007 ಪೂರ್ವಾಹ್ನ | 14.2.2008 | 15.2.2008 |
| 4 | ಜಿ. ಬಸವರಾಜು, ಸಹಾಯಕ ಅಭಿಯೋಗ, ನಿರ್ದೇಶಕರು, ಎಸ್.ಪಿ. ಕಛೇರಿ, ತುಮಕೂರು | 23.2.2007 ಪೂರ್ವಾಹ್ನ | 22.2.2008 | 23.2.2008 |
| 5 | ಆರ್.ಎಸ್. ಮಾವಿನತೋಪು ಸಹಾಯಕ ಅಭಿಯೋಗ, ನಿರ್ದೇಶಕರು, ಅಭಿಯೋಗ ಉಪನಿರ್ದೇಶಕರ ಕಛೇರಿ, ದಾವಣಗೆರೆ ವಿಭಾಗ, ದಾವಣಗೆರೆ | 14.2.2007 ಅಪರಾಹ್ನ | 14.2.2008 | 15.2.2008 |
| 6 | ಎಲ್.ಜಿ. ಕೋಲೇಕರ್ ಸಹಾಯಕ ಅಭಿಯೋಗ, ನಿರ್ದೇಶಕರು, ಅಭಿಯೋಗ ಉಪನಿರ್ದೇಶಕರ ಕಛೇರಿ, ಬೆಳಗಾವಿ ವಿಭಾಗ, ಬೆಳಗಾವಿ | 15.2.2007 ಪೂರ್ವಾಹ್ನ | 14.2.2008 | 15.2.2008 |
| 7 | ಎನ್. ನಾಗೇಂದ್ರಪ್ಪ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, 4ನೇ ಎ.ಸಿ.ಎಂ.ಎಂ. ನ್ಯಾಯಾಲಯ, ಬೆಂಗಳೂರು ನಗರ | 20.2.2007 | 19.2.2008 | 20.2.2008 |
| 8 | ಸಿ.ಎ. ರವೀಂದ್ರ ಸಹಾಯಕ ಅಭಿಯೋಗ, ನಿರ್ದೇಶಕರು, ಆರಕ್ಷಕ ಆಯುಕ್ತರ ಕಛೇರಿ, ಬೆಂಗಳೂರು ನಗರ | 9.2.2007 ಪೂರ್ವಾಹ್ನ | 8.2.2008 | 9.2.2008 |
| 9 | ಎಫ್.ಆರ್. ಪಾಟೀಲ್ ಸಹಾಯಕ ಅಭಿಯೋಗ, ನಿರ್ದೇಶಕರು, ಎಸ್.ಪಿ. ಕಛೇರಿ, ಗುಲ್ಬರ್ಗಾ | 1.3.2007 ಪೂರ್ವಾಹ್ನ | 29.2.2008 | 1.3.2008 |

ಕಂತಿನ ಅನುದಾನವಾಗಿ ಒಟ್ಟು ರೂ.29,23,37,000 ಗಳನ್ನು ಬಿಡುಗಡೆ ಮಾಡಿದೆ ಹಾಗೂ ಉತ್ತರ ಕನ್ನಡ ಜಿಲ್ಲಾ ಪಂಚಾಯತಿಗೆ ಕಡಿತಗೊಳಿಸಿದ್ದ ಅನುದಾನವನ್ನು ಪೂರ್ವಸ್ಥಿತಿಗೆ ತಂದು ರೂ.23,38,000 ಗಳನ್ನು ಬಿಡುಗಡೆ ಮಾಡಿದೆ. ಇದರನ್ವಯ ರಾಜ್ಯ ಸರ್ಕಾರವು ಆಯವ್ಯಯದಲ್ಲಿ ಜಿಲ್ಲೆಗೆ ಲಭ್ಯವಿರುವ ಅನುದಾನದ ಆಧಾರದ ಮೇಲೆ ಓದಲಾಗಿದೆ (4) ರ ಆದೇಶದಲ್ಲಿ ತನ್ನ ಪಾಲಿನ ಎರಡನೇ ಕಂತಿನ ಅನುದಾನ ರೂ. 9,36,49,000 ಗಳನ್ನು ಬಿಡುಗಡೆ ಮಾಡಿದೆ.

ಓದಲಾಗಿದೆ (5) ರ ಪತ್ರಗಳಲ್ಲಿ ಕೇಂದ್ರ ಸರ್ಕಾರ ಎಸ್‌ಜಿಎಸ್‌ವೈ ಯಡಿ ರಾಜ್ಯದ ದಾವಣಗೆರೆ ಜಿಲ್ಲಾ ಪಂಚಾಯತಿಗೆ ಎರಡನೇ ಕಂತಿನ ಅನುದಾನವಾಗಿ ರೂ.1,27,75,000 ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ರಾಜ್ಯ ಸರ್ಕಾರವು ದಾವಣಗೆರೆ ಜಿಲ್ಲಾ ಪಂಚಾಯತಿಗೆ ತನ್ನ ಪಾಲಿನ ಎರಡನೇ ಕಂತಿನ ಅನುದಾನ ರೂ.42,58,000 ಗಳನ್ನು ಬಿಡುಗಡೆ ಮಾಡಬೇಕಾಗಿದೆ. ಇದಲ್ಲದೆ, ಕೇಂದ್ರ ಸರ್ಕಾರ ಎರಡನೇ ಕಂತಿನ ಅನುದಾನ ಬಿಡುಗಡೆ ಮಾಡುವಾಗ ಕಡಿತಗೊಳಿಸಿದ್ದ ಅನುದಾನವನ್ನು ಪೂರ್ವಸ್ಥಿತಿಗೆ ತಂದು ಓದಲಾಗಿದೆ (5) ರ ಪತ್ರ ಸಂಖ್ಯೆ (277) ದಿನಾಂಕ 23–03–2009 ರಲ್ಲಿ ರಾಜ್ಯದ 24 ಜಿಲ್ಲಾ ಪಂಚಾಯತಿಗಳಿಗೆ ರೂ.9,20,18,000 ಗಳನ್ನು ಬಿಡುಗಡೆ ಮಾಡಿದೆ. ಇದರನ್ವಯ ರಾಜ್ಯ ಸರ್ಕಾರ ತನ್ನ ಪಾಲಿನ ಅನುದಾನ ರೂ.3,06,73,000 ಬಿಡುಗಡೆ ಮಾಡಬೇಕಾಗಿದೆ. ಆದರೆ ಕೆಲವೊಂದು ಜಿಲ್ಲಾ ಪಂಚಾಯತಿಗಳಿಂದ ಪುನರ್ವಿನಿಯೋಗ ಮಾಡಿಕೊಂಡು ಓದಲಾಗಿದೆ (6) ಮತ್ತು (7) ರಲ್ಲಿ ಅನುದಾನ ಕೊರತೆ ಇದ್ದ ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಲಾಗಿತ್ತು. ಈ ಕಾರಣವಾಗಿ ಕೆಲವೊಂದು ಜಿಲ್ಲಾ ಪಂಚಾಯತಿಗಳಲ್ಲಿ ಅನುದಾನ ಲಭ್ಯತೆ ಇರುವುದಿಲ್ಲ. ಆದುದರಿಂದ ಜಿಲ್ಲಾ ಪಂಚಾಯತಿಗಳಲ್ಲಿ ಲಭ್ಯವಿರುವ ಅನುದಾನದ ಆಧಾರದ ಮೇಲೆ ರಾಜ್ಯದ 24 ಜಿಲ್ಲಾ ಪಂಚಾಯತಿಗಳಿಗೆ ರೂ.77,72,000 ಬಿಡುಗಡೆಗೊಳಿಸಬೇಕಾಗಿದೆ. ರಾಜ್ಯದ 25 ಜಿಲ್ಲಾ ಪಂಚಾಯತಿಗಳಿಗೆ ರೂ.1,20,30,000 ಗಳನ್ನು ಬಿಡುಗಡೆ ಮಾಡ ಬೇಕಾದುದರಿಂದ ಈ ಆದೇಶ:

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 32 ಎಸ್‌ಜೆವೈ 2008, ಬೆಂಗಳೂರು, ದಿನಾಂಕ: 26ನೇ ಮಾರ್ಚ್ 2009**

ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್‌ಜಿಎಸ್‌ವೈ) ರಾಜ್ಯ ಸರ್ಕಾರವು ತನ್ನ ಪಾಲಿನ ಅನುದಾನವನ್ನು ಅನುಬಂಧದಲ್ಲಿ ತೋರಿಸಿರುವ 25 ಜಿಲ್ಲಾ ಪಂಚಾಯತಿಗಳಿಗೆ ಒಟ್ಟು ರೂ.1,20,30,000 ಗಳನ್ನು (ರೂ. ಒಂದು ಕೋಟಿ ಇಪ್ಪತ್ತು ಲಕ್ಷದ ಮೂವತ್ತು ಸಾವಿರ ಮಾತ್ರ) ಷರತ್ತುಗಳಿಗೆ ಒಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

**ಷರತ್ತುಗಳು :**

1999 ಮೇ ತಿಂಗಳ ಎಸ್‌ಜಿಎಸ್‌ವೈ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಉಪಯೋಗಿಸುವುದು. ಅನುಷ್ಠಾನ ಏಜೆನ್ಸಿಗಳಿಗೆ ಸರ್ಕಾರಿ ಆದೇಶ ತಲುಪಿದ 15 ದಿವಸದೊಳಗೆ ಬಿಡುಗಡೆ ಮಾಡತಕ್ಕದ್ದು.

ನಿಧಿಯ ಮಾದರಿ ಕೇಂದ್ರ ಮತ್ತು ರಾಜ್ಯದ ನಡುವೆ 75 : 25 ರ ಅನುಪಾತದಲ್ಲಿ ನೀಡಲಾಗುವುದು.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ 2501–ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು–01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು–198–ಗ್ರಾಮ ಪಂಚಾಯತ್‌ಗಳಿಗೆ ಸಹಾಯ–6–ಗ್ರಾಮ ಪಂಚಾಯತ್‌ಗಳು–01–ಬ್ಲಾಕ್ ಅನುದಾನ ಕೇಂದ್ರ ಪುರಸ್ಕೃತ ಯೋಜನೆ (ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ) 2008–09 (2501–01–198–6–01) ಸಾಲಿನಲ್ಲಿ ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 7 ಜೆಡ್‌ಪಿಎ 2003 ದಿನಾಂಕ 14–07–2005 ರನ್ವಯ ಖಜಾನೆಯಿಂದ ಪಡೆಯುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳಿಗೆ ಹಣ ತೆಗೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ. ಈ ಯೋಜನೆಯಡಿ ಕೇಂದ್ರ ಸರ್ಕಾರವು ನೇರವಾಗಿ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಿರುವ ಅನುದಾನ ಮತ್ತು ರಾಜ್ಯದ ಪಾಲಿನ ಅನುದಾನವೂ ಸೇರಿದಂತೆ ಒಟ್ಟು ಅನುದಾನವನ್ನು ಸರ್ಕಾರದ ಸುತ್ತೋಲೆ ಸಂಖ್ಯೆ : ಗ್ರಾಅಪ 14 ಎಸ್ ಜೆ ವೈ 2007 ದಿನಾಂಕ 18–04–2007 ರ ಸೂಚನೆಯಂತೆ ಕ್ರಮ ಕೈಗೊಳ್ಳುವುದು.

ಬಿಡುಗಡೆ ಮಾಡುವ ಹಣದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

2008–09ನೇ ಸಾಲಿನ ಅನುಮೋದಿತ ವಾರ್ಷಿಕ ಯೋಜನೆಯನ್ನು ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಯೋಜನಾ ನಿರ್ದೇಶಕರು (ಡಿಆರ್‌ಡಿಎ) ಇವರು ಸರ್ಕಾರಕ್ಕೆ ಸಲ್ಲಿಸುವುದು.

ಆರ್ಥಿಕ ಮತ್ತು ಭೌತಿಕ ಸಾಧನೆಯ ಮಾಸಿಕ ಪ್ರಗತಿ ವರದಿಯನ್ನು ಪ್ರತಿ ಮಾಹೆಯ 5ನೇ ತಾರೀಖಿನೊಳಗೆ ಕೇಂದ್ರ ಸರ್ಕಾರದ onlineಗೆ upload ಮಾಡಿ ಪ್ರತಿಯನ್ನು ಸ್ವ ಉದ್ಯೋಗ ಕಾರ್ಯಕ್ರಮಗಳ ಶಾಖೆಗೆ ತಪ್ಪದೇ ಕಳುಹಿಸುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ನ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಆಡಿಟ್ ಮಾಡಿದ ಲೆಕ್ಕಗಳನ್ನು ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ : ಗ್ರಾಅಪ 116 ಪಿಬಿಎಸ್ 2009 ದಿನಾಂಕ 26–03–2009 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ: ಶಮ್ಲಾ ಇಕ್ಬಾಲ್**

ನಿರ್ದೇಶಕರು (ಸ್ವಉಕಾ) ಹಾಗೂ

ಪ.ನಿ. ಸರ್ಕಾರದ ಉಪ ಕಾರ್ಯದರ್ಶಿಗಳು

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**ಅನುಬಂಧ**

**ಸರ್ಕಾರದ ಆದೇಶದ ಸಂಖ್ಯೆ : ಗ್ರಾಅಪ 32 ಎಸ್‌ಜೆವೈ 2008, ಬೆಂಗಳೂರು, ದಿನಾಂಕ : 26–03–2009**

(ಅ) (ರೂ.ಗಳಲ್ಲಿ)

| ಕ್ರ ಸಂ | ಜಿಲ್ಲಾ ಪಂಚಾಯತಿ ಹೆಸರು | [illegible] | ಡಿ.ಡಿ.ಓ **ಕೋಡ್** | ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಎರಡನೇ ಕಂತಿನ ಅನುದಾನ | ರಾಜ್ಯ ಸರ್ಕಾರ ಬಿಡುಗಡೆ ಮಾಡುತ್ತಿರುವ ಎರಡನೇ ಅನುದಾನ |
|---|---|---|---|---|---|
| 1 | ದಾವಣಗೆರೆ | 451 | 1700ZZ0002 | 1,27,75,000 | 42,58,000 |

(ಆ)

| ಕ್ರ ಸಂ | ಜಿಲ್ಲಾ ಪಂಚಾಯತಿ ಹೆಸರು | [illegible] | ಡಿ.ಡಿ.ಓ **ಕೋಡ್** | ಕೇಂದ್ರ ಸರ್ಕಾರ 2ನೇ ಕಂತಿನ ಅನುದಾನ ಬಿಡುಗಡೆ ಮಾಡುವಾಗ ಕಡಿತಗೊಳಿಸಿದ್ದ ಅನುದಾನವನ್ನು ಪೂರ್ವ ಸ್ಥಿತಿಗೆ ತಂದು ಬಿಡುಗಡೆ ಮಾಡಿದ ಅನುದಾನ | ಇದಕ್ಕನುಗುಣವಾಗಿ ರಾಜ್ಯ ಸರ್ಕಾರವು ಬಿಡುಗಡೆ ಮಾಡ ಬೇಕಾದ ಅನುದಾನ | ಜಿಲ್ಲಾ ಪಂಚಾಯತಿಗಳಲ್ಲಿ ಲಭ್ಯತೆಗೆ ಅನುಗುಣವಾಗಿ ರಾಜ್ಯ ಸರ್ಕಾರ ಬಿಡುಗಡೆ ಮಾಡುತ್ತಿರುವ ಅನುದಾನ |
|---|---|---|---|---|---|---|
| 1 | ಬೆಂಗಳೂರು (ಗ್ರಾ) | 402 | 0300ZZ8001 | 34,79,000 | 11,60,000 | 0 |
| 2 | ಬೆಂಗಳೂರು ನಗರ | 401 | 0100ZZ8001 | 8,30,000 | 2,77,000 | 2,77,000 |
| 3 | ಬೆಳಗಾಂ | 413 | 2200ZZ0002 | 25,42,000 | 8,47,000 | 8,47.000 |
| 4 | ಬಳ್ಳಾರಿ | 418 | 3400ZZ0001 | 70,000 | 23,000 | 23,000 |
| 5 | ಬಿಜಾಪುರ | 414 | 2800ZZ9152 | 68,64,000 | 22,88,000 | 0 |
| 6 | ಚಾಮರಾಜನಗರ | 456 | 1000ZZ0001 | 40,44,000 | 13,48,000 | 0 |
| 7 | ಚಿಕ್ಕಮಗಳೂರು | 408 | 1800ZZ0017 | 50,04,000 | 16,68,000 | 0 |
| 8 | ಚಿಕ್ಕಬಳ್ಳಾಪುರ | 453 | 0600ZZ0001 | 41,22,000 | 13,74,000 | 0 |
| 9 | ಚಿತ್ರದುರ್ಗ | 403 | 1600ZZ0001 | 25,82,000 | 8,61,000 | 8,61,000 |
| 10 | ದಕ್ಷಿಣ ಕನ್ನಡ | 409 | 1900ZZ0047 | 12,72,000 | 4,24,000 | 0 |
| 11 | ಧಾರವಾಡ | 415 | 2500ZZ8798 | 2,25,000 | 75,000 | 75,000 |
| 12 | ಗುಲ್ಬರ್ಗಾ | 417 | 3200ZZ0003 | 21.99,000 | 7,33,000 | 7,33,000 |

| | | | | | | |
|---|---|---|---|---|---|---|
| 13 | ಹಾಸನ | 410 | 1300ZZ0003 | 11,13,000 | 3,71,000 | 3,71,000 |
| 14 | ಹಾವೇರಿ | 463 | 2700ZZ0001 | 12,41,000 | 4,14,000 | 4,14,000 |
| 15 | ಕೊಡಗು | 411 | 1200ZZ0001 | 32,11,000 | 10,70,000 | 2,52,000 |
| 16 | ಕೋಲಾರ | 404 | 0700ZZ8002 | 82,97,000 | 27,66,000 | 0 |
| **17** | ಕೊಪ್ಪಳ | 466 | 1500ZZ0010 | 77,55,000 | 25,85,000 | 0 |
| 18 | ಮಂಡ್ಯ | 412 | 1100ZZ0001 | 87,01,000 | 29,00,000 | 0 |
| 19 | ಮೈಸೂರು | 407 | 0900ZZ0001 | 27,09,000 | 9,03,000 | 9,03,000 |
| 20 | ರಾಯಚೂರು | 420 | 3600ZZ0001 | 70,94,000 | 23,65,000 | 0 |
| 21 | ಶಿವಮೊಗ್ಗ | 405 | 1400ZZ0002 | 13,79,000 | 4,60,000 | 4,60,000 |
| 22 | ತುಮಕೂರು | 406 | 0800ZZ0001 | 63,04,000 | 21,01,000 | 0 |
| 23 | ಉಡುಪಿ | 457 | 2000ZZ0001 | 33,95,000 | 11,32,000 | 11,32,000 |
| 24 | ಉತ್ತರ ಕನ್ನಡ | 416 | 3000ZZ0080 | 75,86,000 | 25,29,000 | 14,24,000 |
| | **ಒಟ್ಟು:** | | | **9,20,18,000** | **3,06,73,000** | **77,72,000** |

**ಘೋಷ್ವಾರೆ**

| | |
|---|---|
| (ಅ) | 42,58,000 |
| (ಆ) | 77,72,000 |
| **ಒಟ್ಟು ರೂ.** | **1,20,30,000** |

**ಡಾ: ಶಮ್ಲಾ ಇಕ್ಬಾಲ್**
ನಿರ್ದೇಶಕರು (ಸ್ವಉಕಾ) ಹಾಗೂ
ಪ.ನಿ. ಸರ್ಕಾರದ ಉಪ ಕಾರ್ಯದರ್ಶಿಗಳು
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

ಪಿ.ಆರ್. 1118

**ವಿಷಯ:–** ಬೆಳಗಾಂ ಜಿಲ್ಲೆ, ಚಿಕ್ಕೋಡಿ ತಾಲ್ಲೂಕು, ಜತ್ರಾಟ ಗ್ರಾಮ ಪಂಚಾಯತಿಯ ಶಿರ್ಪೇವಾಡಿ ಗ್ರಾಮದಲ್ಲಿ ಸಹಕಾರ ಶಿಕ್ಷಣ ಮತ್ತು ಸಮಾಜ ಸೇವಾ ಸಂಸ್ಥೆ (ರಿ), ಯಕ್ಸಾಂಬ ಚಿಕ್ಕೋಡಿ ತಾಲ್ಲೂಕು ರವರು ಬೆಳಗಾಂ ಜಿಲ್ಲಾ ಪಂಚಾಯತ್ ಸಹಯೋಗದೊಂದಿಗೆ ಬಸವಜ್ಯೋತಿ ಸಿದ್ಧ ಉಡುಪು ಮತ್ತು ತರಬೇತಿ ಕೇಂದ್ರವನ್ನು ಸ್ಥಾಪಿಸುವ ಬಗ್ಗೆ.

**ಓದಲಾಗಿದೆ:–**
1. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಬೆಳಗಾಂ ರವರ ಪತ್ರದ ಸಂ.ಜಿಪಂ/ಎಸ್‌ಜಿಎಸ್‌ವೈ/ವಿವ/158/08–09 ದಿನಾಂಕ.13.01.2009.
2. ನಿರ್ದೇಶಕರು, ಸ್ವ ಉಕಾ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ದಿನಾಂಕ:23–05–2009 ರಂದು ನಡಸೆದ ವಿಡಿಯೋ ಕಾನ್ ಫರ್ಸೆನ್ಸ್ ಸಭೆಯ ನಡವಳಿ.

**ಪ್ರಸ್ತಾವನೆ:–**

ಕೃಷಿ ನಂತರ ಹೆಚ್ಚಿನ ಉದ್ಯೋಗ ಒದಗಿಸುವ ಕ್ಷೇತ್ರ ಜವಳಿ ವಲಯವಾಗಿರುತ್ತದೆ. ಸಿದ್ಧ ಉಡುಪು ಕೈಗಾರಿಕೆಗಳು ಬೆಂಗಳೂರಿನಲ್ಲಿ ಮಾತ್ರ ಕೇಂದ್ರೀಕೃತವಾಗಿದ್ದು, ಉಳಿದ ಜಿಲ್ಲೆಗಳಲ್ಲಿ ಸಿದ್ಧ ಉಡುಪು ತಯಾರಿಕೆಯಲ್ಲಿ ನುರಿತ ಕೆಲಸಗಾರರು ಸಿಗದ ಪ್ರಯುಕ್ತ ಸಿದ್ಧ ಉಡುಪು ಘಟಕಗಳು ವಿವಿಧ ಜಿಲ್ಲೆಗಳಲ್ಲಿ ಸ್ಥಾಪನೆಯಾಗುತ್ತಿಲ್ಲ. ವಿವಿಧ ಜಿಲ್ಲೆಗಳಲ್ಲಿ ಸಿದ್ಧ ಉಡುಪು ಘಟಕಕ್ಕೆ ಅವಶ್ಯವಿರುವ ನುರಿತ ಕೆಲಸಗಾರರನ್ನು ತಯಾರು ಮಾಡುವುದು ಹಾಗೂ ಜಿಲ್ಲೆಯಲ್ಲಿ ಸಿದ್ಧ ಉಡುಪು ಉದ್ಯಮಕ್ಕೆ ಬೇಡಿಕೆ ಸೃಷ್ಟಿಸುವುದು ಅವಶ್ಯವಿರುತ್ತದೆ ಹಾಗೂ ಎಸ್‌ಜಿಎಸ್‌ವೈ ಯೋಜನೆಯಲ್ಲಿ ಸ್ವ ಉದ್ಯೋಗ ಸೃಷ್ಟಿಸುವುದು ಅವಶ್ಯವಿರುತ್ತದೆ. ಸಾರ್ವಜನಿಕ ಕ್ಷೇತ್ರದಲ್ಲಿ ನಿಸ್ವಾರ್ಥ ಸೇವೆ ಸಲ್ಲಿಸುವ ಸ್ವಯಂ ಸೇವಾ ಸಂಸ್ಥೆ ಜೊತೆ ತರಬೇತಿಯು ಪ್ರಾರಂಭಿಸುವ ಉದ್ದೇಶ ರಾಜ್ಯ ಸರ್ಕಾರ ಹೊಂದಿರುತ್ತದೆ. ಇದರಂತೆ, ಬೆಳಗಾಂ ಜಿಲ್ಲೆ, ಚಿಕ್ಕೋಡಿ ತಾಲ್ಲೂಕು, ಜತ್ರಾಟ ಗ್ರಾಮ ಪಂಚಾಯತಿಯ ಶಿರ್ಪೇವಾಡಿ ಗ್ರಾಮದಲ್ಲಿ ಸಹಕಾರ ಶಿಕ್ಷಣ ಮತ್ತು ಸಮಾಜ ಸೇವಾ ಸಂಸ್ಥೆ (ರಿ), ಯಕ್ಸಾಂಬ ಚಿಕ್ಕೋಡಿ ತಾಲ್ಲೂಕು ರವರು ಬೆಳಗಾಂ ಜಿಲ್ಲಾ ಪಂಚಾಯತ್ ಸಹಯೋಗದೊಂದಿಗೆ ಬಸವಜ್ಯೋತಿ ಸಿದ್ಧ ಉಡುಪು ಮತ್ತು ತರಬೇತಿ ಕೇಂದ್ರವನ್ನು

ಸ್ಥಾಪಿಸಲು ಉದ್ದೇಶ ಹೊಂದಿರುವ ಬಗ್ಗೆ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಬೆಳಗಾಂ ಇವರು ಓದಲಾಗಿದೆ (1) ರ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸಿ, ಸದರಿ ಸಂಸ್ಥೆಯು ಬಾಡಿಗೆ ಕಟ್ಟಡದಲ್ಲಿ ಕೇಂದ್ರ ಸ್ಥಾಪಿಸಲು ಉದ್ದೇಶ ಹೊಂದಿರುವುದರಿಂದ ಕೇಂದ್ರ ಅನುಮತಿ ನೀಡಲು ಕೋರಿರುತ್ತಾರೆ. ಸದರಿ ಪ್ರಸ್ತಾವನೆ ಬಗ್ಗೆ ದಿ:23–05–09 ರಂದು ನಿರ್ದೇಶಕರು ಸ್ವಉಕಾ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆಸಿದ ವಿಡಿಯೋ ಕಾನ್‌ಫರೆನ್ಸ್ ಸಭೆಯಲ್ಲಿ ಬಸವಜ್ಯೋತಿ ಸಿದ್ಧ ಉಡುಪು ಮತ್ತು ತರಬೇತಿ ಕೇಂದ್ರ ಸ್ಥಾಪಿಸಲು ಮಂಜೂರಾತಿ ನೀಡಲು ಕೈಗೊಂಡ ನಿರ್ಧಾರಕ್ಕೆ ಸರ್ಕಾರದ ಕಾರ್ಯದರ್ಶಿಗಳು ಅನುಮೋದನೆ ನೀಡಿದ್ದು, ಕೇಂದ್ರ ಸ್ಥಾಪಿಸಲು ಮಂಜೂರಾತಿ ನೀಡಬೇಕಾಗಿರುತ್ತದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ.18.ಎಸ್‌ಜಿವೈ(ಇನ್‌ಪ್ರಾ)2009ಬೆಂಗಳೂರು, ದಿನಾಂಕ: 28ನೇ ಮೇ 2009**

ರಾಜ್ಯ ಸರ್ಕಾರವು ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಬೆಳಗಾಂ ಜಿಲ್ಲೆ, ಚಿಕ್ಕೋಡಿ ತಾಲ್ಲೂಕು, ಜತ್ರಾಟ ಗ್ರಾಮ ಪಂಚಾಯತಿಯ ಶಿರ್ಪೇವಾಡಿ ಗ್ರಾಮದಲ್ಲಿ ಸಹಕಾರ ಶಿಕ್ಷಣ ಮತ್ತು ಸಮಾಜ ಸೇವಾ ಸಂಸ್ಥೆ (ರಿ), ಯಕ್ಸಾಂಬ ಚಿಕ್ಕೋಡಿ ತಾಲ್ಲೂಕು ರವರು ಬೆಳಗಾಂ ಜಿಲ್ಲಾ ಪಂಚಾಯತ್ ಸಹಯೋಗದೊಂದಿಗೆ ಬಸವಜ್ಯೋತಿ ಸಿದ್ಧ ಉಡುಪು ಮತ್ತು ತರಬೇತಿ ಕೇಂದ್ರವನ್ನು ಸ್ಥಾಪಿಸಲು ಮತ್ತು ಈ ಕೇಂದ್ರಕ್ಕೆ ಯಂತ್ರೋಪಕರಣ, ಪೀಠೋಪಕರಣ ಮತ್ತು ವಿದ್ಯುತ್‌ಚ್ಛಕ್ತಿ ಸಂಪರ್ಕಕ್ಕಾಗಿ ಸ್ವರ್ಣ ಜಯಂತಿ ಗ್ರಾಮ ಸ್ವರೋಜಗಾರ್ ಯೋಜನೆಯ ಮೂಲಭೂತ ಸೌಕರ್ಯ ನಿಧಿಯಿಂದ ರೂ.20.00 ಲಕ್ಷ (ರೂ. ಇಪ್ಪತ್ತು ಲಕ್ಷ ಮಾತ್ರ) ಬಿಡುಗಡೆ ಮಾಡಲು ಈ ಕೆಳಕಂಡ ಷರತ್ತುಗಳೊಂದಿಗೆ ಮಂಜೂರಾತಿ ನೀಡಲಾಗಿದೆ.

**ಷರತ್ತುಗಳು:**

1) ಯಂತ್ರೋಪಕರಣ, ಪೀಠೋಪಕರಣ ಹಾಗೂ ವಿದ್ಯುಚ್ಛಕ್ತಿ ಸಂಪರ್ಕಕ್ಕಾಗಿ ಗರಿಷ್ಠ ರೂ. 20.00 ಲಕ್ಷ (ರೂ. ಇಪ್ಪತ್ತು ಲಕ್ಷ ಮಾತ್ರ) ಅಥವಾ ನೈಜ ವೆಚ್ಚ ಇವೆರಡರಲ್ಲಿ ಕಡಿಮೆ ಇರುವ ಮೊತ್ತವನ್ನು ಮಾತ್ರ ಪಾವತಿಸುವುದು. ಅನುದಾನವನ್ನು ಯಾವ ಉದ್ದೇಶಕ್ಕಾಗಿ ಬಿಡುಗಡೆ ಮಾಡಿದೆಯೋ ಅದೇ ಉದ್ದೇಶಕ್ಕಾಗಿ ಭರಿಸತಕ್ಕದ್ದು.

2) ಜಿಲ್ಲಾ ಪಂಚಾಯತ್, ಚಿಕ್ಕಮಗಳೂರು ಜಿಲ್ಲೆಯವರು ಅನುದಾನ ಬಿಡುಗಡೆ ಮಾಡುವ ಮೊದಲು ಸಂಸ್ಥೆಯವರು ಈ ಕೆಳಕಂಡ ಕ್ರಮಗಳನ್ನು ಕೈಗೊಂಡಿರಬೇಕು.

ಅ) ತರಬೇತಿ ಸಂಸ್ಥೆ ನಡೆಸಲು ಅವಶ್ಯವಿರುವ ಸ್ವಂತ ಕಟ್ಟಡ/ಬಾಡಿಗೆ ಅಥವಾ ಲೀಸ್ ಆಧಾರದ ಕಟ್ಟಡ ಸಂಸ್ಥೆಯ ಹೆಸರಿನಲ್ಲಿರಬೇಕು. ತರಬೇತಿ ಕೇಂದ್ರವು 4000 ಚ.ಅಡಿ ಸ್ಥಳಾವಕಾಶ ಹೊಂದಿರಬೇಕು.

ಆ) ಈ ಕಟ್ಟಡದಲ್ಲಿ ಮೂಲಭೂತ ಸೌಕರ್ಯಗಳಾದ ಕುಡಿಯುವ ನೀರು, ಮಹಿಳೆಯರಿಗೆ ಹಾಗೂ ಪುರುಷರಿಗೆ ಪ್ರತ್ಯೇಕ ಶೌಚಾಲಯ ಹೊಂದಿರಬೇಕು.

ಇ ತರಬೇತಿ ನಡೆಸಲು ಅವಶ್ಯವಿರುವ 20 HP ವಿದ್ಯುತ್ ಲಭ್ಯವಿರುವ/ಮಂಜೂರಾಗಿರುವ ಬಗ್ಗೆ ಸಂಬಂಧಪಟ್ಟ ವಿದ್ಯುತ್ ಸರಬರಾಜು ಸಂಸ್ಥೆಯವರಿಂದ ದೃಢೀಕರಣ ಪತ್ರ ಪಡೆದಿರಬೇಕು.

ಈ ತರಬೇತಿ ನಡೆಸಲು ಅವಶ್ಯವಿರುವ ತರಬೇತುದಾರರನ್ನು ನೇಮಕ ಮಾಡಿಕೊಂಡಿರಬೇಕು/ ಸ್ಥಳೀಯವಾಗಿ ತರಬೇತಿ ನೀಡಲು ಇಚ್ಛಿಸುವವರನ್ನು TOT (Training of trainers) ತರಬೇತಿಗಾಗಿ ATDC/ILFS ಅಥವಾ ಇತರೆ ಪ್ರತಿಷ್ಠಿತ ಸಂಸ್ಥೆಗೆ ನಿಯೋಜಿಸಬೇಕು.

3) ತರಬೇತಿ ಕೇಂದ್ರವನ್ನು ಜೂನ್ 2009 ರಲ್ಲಿ ಪ್ರಾರಂಭಿಸಲು ಅವಶ್ಯವಿರುವ ಎಲ್ಲಾ ಪೂರ್ವ ಸಿದ್ಧತೆ–ಗಳನ್ನು ಮಾಡಿಕೊಳ್ಳುವುದು.

4) ತರಬೇತಿ ಕೇಂದ್ರವನ್ನು ಪ್ರಾರಂಭಿಸಲು ಅಂದಾಜು ವೆಚ್ಚ, ಅಗತ್ಯವಿರುವ ಯಂತ್ರೋಪಕರಣಗಳು, ಪೀಠೋಪಕರಣಗಳು, ಸಲಕರಣೆಗಳು ಮತ್ತು ವಿದ್ಯುತ್ ಸಲಕರಣೆಗಳ ಬಗ್ಗೆ ವಿವರಗಳನ್ನು ಅನುಬಂಧ–ಎ ರಲ್ಲಿ ಮತ್ತು ಸಂಸ್ಥೆಯ ಸಿಬ್ಬಂದಿ ವಿವರಗಳನ್ನು ಅನುಬಂಧ–ಬಿ ರಲ್ಲಿ ವಿವರಿಸಲಾಗಿದೆ.

5) ಯಂತ್ರೋಪಕರಣ ಖರೀದಿಯಲ್ಲಿ ಪಾರದರ್ಶಕ ಕಾಯಿದೆ ನಿಯಮಗಳನ್ನು ಕಡ್ಡಾಯವಾಗಿ ಪಾಲಿಸುವುದು.

6) ಯಂತ್ರೋಪಕರಣಗಳ ವೆಚ್ಚವನ್ನು ಎಸ್ ಜಿ ಎಸ್ ವೈ ಮೂಲಭೂತ ಸೌಕರ್ಯ ನಿಧಿಯಿಂದ ಭರಿಸುವುದು. ಈ ಯಂತ್ರೋಪಕರಣಗಳು ಜಿಲ್ಲಾ ಪಂಚಾಯತಿ, ಬೆಳಗಾಂ ಇದರ ಆಸ್ತಿಯಾಗಿದ್ದು, ರಿಜಿಸ್ಟರ್ ನಲ್ಲಿ ದಾಖಲೆ ಮಾಡುವುದು.

7) ಎಸ್ ಜಿ ಎಸ್ ವೈ ಯೋಜನೆಯ ಮೂಲಭೂತ ಸೌಕರ್ಯದಡಿ ಯಂತ್ರೋಪಕರಣ/ ಪೀಠೋಪಕರಣವನ್ನು ನೀಡಲಾಗುತ್ತಿದ್ದು, ಸಂಸ್ಥೆಯವರು ಅನಿವಾರ್ಯ ಕಾರಣದಿಂದ ತರಬೇತಿ ಕೇಂದ್ರವನ್ನು ಸ್ಥಗಿತಗೊಳಿಸಿದರೆ ಯಂತ್ರೋಪಕರಣ/ಪೀಠೋಪಕರಣವನ್ನು ಬೇರೆ ಕೇಂದ್ರಕ್ಕೆ ವರ್ಗಾಯಿಸುವ ಅಥವಾ ಸದರಿ ಸಂಸ್ಥೆಯ ಕಟ್ಟಡದಲ್ಲಿಯೇ ಬಾಡಿಗೆಯ ಆಧಾರದ ಮೇಲೆ ನಡೆಸುವ ಅಧಿಕಾರ ಜಿಲ್ಲಾ ಪಂಚಾಯತಿಯದಾಗಿರುತ್ತದೆ. ಇದರ ಬಗ್ಗೆ ಜಿಲ್ಲಾ ಪಂಚಾಯತ್ ಮತ್ತು ಸ್ವಯಂ ಸೇವಾ ಸಂಸ್ಥೆಗಳು ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.

8) ಕೇಂದ್ರ ಪ್ರಾರಂಭ ಆದ ನಂತರ "ಬಸವಜ್ಯೋತಿ ಸಿದ್ಧ ಉಡುಪು ಮತ್ತು ತರಬೇತಿ ಕೇಂದ್ರ" ಜಿಲ್ಲಾ ಪಂಚಾಯತ್, ಬೆಳಗಾಂ ಇವರ ಸಹಯೋಗದಲ್ಲಿ ನಾಮಫಲಕ ಹಾಕುವುದು.

9) ಸಿದ್ಧ ಉಡುಪು ತರಬೇತಿ ಮತ್ತು ಉತ್ಪಾದನಾ ಕೇಂದ್ರವನ್ನು ಕನಿಷ್ಠ 10 ವರ್ಷ ಸ್ವಯಂ ಸೇವಾ ಸಂಸ್ಥೆಗಳು ಕಡ್ಡಾಯವಾಗಿ ನಡೆಸಬೇಕು.

10) ಈ ತರಬೇತಿ ಮತ್ತು ಉತ್ಪಾದನಾ ಕೇಂದ್ರವು ಅಪೆರಲ್ ಟ್ರೈನಿಂಗ್ ಮತ್ತು ಡಿಸೈನ್ ಸೆಂಟರ್(ATDC) ಬೆಂಗಳೂರು ಇವರು ಅಳವಡಿಸಿದ 1) ಪಠ್ಯಕ್ರಮ 2) ಯಂತ್ರೋಪಕರಣ 3) ತರಬೇತಿಯ ಗುಣಮಟ್ಟವನ್ನು ಬೆಂಚ್ ಮಾರ್ಕ್ ಆಗಿ ಇಟ್ಟುಕೊಂಡು ಈ ಮಾದರಿಯಲ್ಲಿ ತರಬೇತಿ ಕೇಂದ್ರವನ್ನು ಸ್ಥಾಪಿಸತಕ್ಕದ್ದು.

11) ಈ ತರಬೇತಿ ಸಂಸ್ಥೆಯ ನಿರ್ವಹಣೆಗಾಗಿ ಆವರ್ತಕ ವೆಚ್ಚವನ್ನು ಕಪಾರ್ಟ ಸಂಸ್ಥೆಯಿಂದ ಪಡೆಯುವುದು. ಎಸ್ ಜಿ ಎಸ್ ವೈ ಫಲಾನುಭವಿಗಳಿಗೆ ಎಸ್ ಜಿ ಎಸ್ ವೈ ತರಬೇತಿ ನಿಧಿಯಿಂದ ನೀಡುವ ತರಬೇತಿ ವೆಚ್ಚ/ಗೌರವಧನ ಮತ್ತು ಇತರೆ ಫಲಾನುಭವಿಗಳಿಗೆ ಆಯಾ ಇಲಾಖೆಯವರು ನೀಡುವ ಗೌರವ ಧನದಿಂದ ಮತ್ತು ತರಬೇತಿ ಸಂಸ್ಥೆಯು ನಡೆಸುವ ಪ್ರತ್ಯೇಕ ತರಬೇತಿಗಳಿಂದ ಪಡೆದ ಶಿಷ್ಯವೇತನ ಮತ್ತು ಗೌರವಧನದಲ್ಲಿ ತರಬೇತಿ ಸಂಸ್ಥೆಯ ನಿರ್ವಹಣಾ ವೆಚ್ಚವನ್ನು ಭರಿಸಬೇಕು.

12) ತರಬೇತಿಯ ಗೌರವಧನಕ್ಕಿಂತ ಆವರ್ತಕ ವೆಚ್ಚ ಹೆಚ್ಚಾದಲ್ಲಿ ಉಳಿದ ಹಣವನ್ನು ಸಂಸ್ಥೆಯವರೇ ಭರಿಸುವುದು.

14) ಸದರಿ ತರಬೇತಿ ಮತ್ತು ಉತ್ಪಾದನಾ ಕೇಂದ್ರದಲ್ಲಿ ಡಾ:ಅಂಬೇಡ್ಕರ್ ಅಭಿವೃದ್ಧಿ ನಿಗಮ, ಡಿ.ದೇವರಾಜ ಅರಸ್ ಅಭಿವೃದ್ಧಿ ನಿಗಮ, ಕೈಮಗ್ಗ ಮತ್ತು ಜವಳಿ ಇಲಾಖೆ, ಸ್ವರ್ಣ ಜಯಂತಿ ಗ್ರಾಮ ಸ್ವರೋಜಗಾರ್ ಯೋಜನೆಯ ಫಲಾನುಭವಿಗಳು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಫಲಾನುಭವಿಗಳು ಹಾಗೂ ಇತರೆ ಇಲಾಖೆಯ ಯೋಜನೆಗಳಲ್ಲಿ ಆಯ್ಕೆಯಾದ ಫಲಾನುಭವಿಗಳಿಗೆ ತರಬೇತಿ ನೀಡುವುದು. ಇತರೆ ಅಭ್ಯರ್ಥಿಗಳಿಗೆ ತರಬೇತಿ ನೀಡಲು ತರಬೇತಿ ಅವಧಿಯನ್ನು ಹಾಗೂ ತರಬೇತಿಯ course fee ಯನ್ನು ಮುಖ್ಯ ಕಾರ್ಯನಿರ್ವಹಣಾಧಿಕಾರಿ ಜಿಲ್ಲಾ ಪಂಚಾಯತ್ ಹಾಗೂ ಸ್ವಯಂ ಸೇವಾ ಸಂಸ್ಥೆಗಳ ಜೊತೆ ಸೇರಿ ನಿರ್ಧರಿಸುವುದು.

15) ಸಂಸ್ಥೆಗೆ ಬೇಕಾದ ಸಿಬ್ಬಂದಿಯನ್ನು ತಾಂತ್ರಿಕ ನೈಪುಣ್ಯತೆಯ ಅಧಾರದ ಮೇಲೆ ನೇಮಿಸುವ ಜವಾಬ್ದಾರಿ ಜಿಲ್ಲಾ ಪಂಚಾಯತ್ ಮತ್ತು ಸ್ವಯಂ ಸೇವಾ ಸಂಸ್ಥೆಯದಾಗಿರುತ್ತದೆ.

16) ಪ್ರತಿ ತಿಂಗಳು ಕನಿಷ್ಠ 30 ಅಭ್ಯರ್ಥಿಗಳಿಗೆ ತರಬೇತಿ ನೀಡುವುದು.

17) ಜಿಲ್ಲಾ ಮಟ್ಟದಲ್ಲಿ ಉಸ್ತುವಾರಿ ಸಮಿತಿಯನ್ನು ಮುಖ್ಯ ಕಾರ್ಯನಿರ್ವಹಣಾಧಿಕಾರಿ ಇವರ ಅಧ್ಯಕ್ಷತೆಯಲ್ಲಿ ರಚನೆ ಮಾಡಲಾಗಿದೆ. ಈ ಸಮಿತಿಯು ಪ್ರತಿ ತಿಂಗಳು ಪ್ರಗತಿ ಪರಿಶೀಲನಾ ಸಭೆ ನಡೆಸುವುದು.

18) ತರಬೇತಿ ಸಂಸ್ಥೆಯ ಆದಾಯ ಮತ್ತು ಖರ್ಚನ್ನು ಪ್ರತ್ಯೇಕವಾಗಿ ನಿರ್ವಹಿಸುವುದು.

19) ಈ ಕೇಂದ್ರವು ಮುಖ್ಯ ಮಾತೃ ಕೇಂದ್ರವಾಗಿ ನಿರ್ವಹಿಸಿ ಜಿಲ್ಲೆಯಲ್ಲಿ ಉಪ ಉತ್ಪಾದನಾ ಕೇಂದ್ರಗಳನ್ನು (ancillary unit) ಜಿಲ್ಲೆಯಲ್ಲಿ ಸ್ಥಾಪಿಸಲು ಕ್ರಮವಹಿಸುವುದು.

ಮೇಲಿನ ಎಲ್ಲಾ ಷರತ್ತುಗಳನ್ನು ಒಳಗೊಂಡಂತೆ "ಬೆಳಗಾಂ ಜಿಲ್ಲೆ, ಚಿಕ್ಕೋಡಿ ತಾಲ್ಲೂಕು, ಜತ್ರಾಟ ಗ್ರಾಮ ಪಂಚಾಯತಿಯ ಶಿರ್ಪೇವಾಡಿ ಗ್ರಾಮದಲ್ಲಿ ಸಹಕಾರ ಶಿಕ್ಷಣ ಮತ್ತು ಸಮಾಜ ಸೇವಾ ಸಂಸ್ಥೆ (ರಿ), ಯಕ್ಸಾಂಬ ಚಿಕ್ಕೋಡಿ ತಾಲ್ಲೂಕು ರವರು ಜಿಲ್ಲಾ ಪಂಚಾಯತ್ ಸಹಯೋಗದೊಂದಿಗೆ ಬಸವಜ್ಯೋತಿ ಸಿದ್ಧ ಉಡುಪು ಮತ್ತು ತರಬೇತಿ ಕೇಂದ್ರ" ಮತ್ತು ಜಿಲ್ಲಾ ಪಂಚಾಯತ್, ಬೆಳಗಾಂ ರವರು ಒಡಂಬಡಿಕೆ ಮಾಡಿಕೊಂಡು ಅದರ ಪ್ರತಿಯನ್ನು ಸರ್ಕಾರಕ್ಕೆ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ: ಶಮ್ಲಾ ಇಕ್ಬಾಲ್**

ನಿರ್ದೇಶಕರು(ಸ್ವಉಕಾ)

ಹಾಗೂ ಪದ ನಿಮಿತ್ತ ಉಪ ಕಾರ್ಯದರ್ಶಿ

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**Annexure-A**

**Detail of Machinery & Equipments**

| Sl. No. | Details | Make & Specifications | No.s. | Amount (Approximate) |
|---|---|---|---|---|
| 1 | Power Operated High speed SNLS Sewing Machine | JUKI Company Model No. DDL-8300 | 35 | 6.02.000 |
| 2 | Specialised Machines | | | |
| a | High Speed Single Needle Lock stich Button holing Machine | Juki Company Model No. LBH-781 U | | |
| b | High Speed Direct Drive Button Sewing Machine | Juki Company LK-1903 ASS | | |

| | | | | |
|---|---|---|---|---|
| c | High speed Direct Drive Bar tacking Machine (Computer Controlled) | Juki Company LK-1900 ASS | | |
| d | Two Needle Lock stitch,Fixed Needle Bar Machine | Juki Company LH-3128 | | |
| e | Single Needle Zig-Zag Machine | Juki Company LZ-2284 N | | |
| f | Five thread overlock machine | Juki MO-6716 S-DE4-40H | 1 | |
| g | Cutting Machine | Eastman | 1 | |
| h | Double Needle lock stich split bar machine | Juki LH/3568 SF | | |
| i | Ironing Table with 2 Iron Boxes | Ramson company | | |
| j | Diesel Generating Set 20 KVA | Kirloskar or Other reputed company | 1 | |
| k | Electrical Wiring with materials | | | |
| | | * Item No. 2 total restricted to Rs: | 11.98,000 | |
| Office Equipments | | | | |
| 1 | Steel Almirah | | 2 | |
| 2 | Steel Racks (Slotted Angles) | | 4 | |
| 3 | Office Table | | 1 | |
| 4 | Office Chairs | S type | 8 | |
| 5 | Mechanic Table | | 1 | |
| 6 | Pattern making table | | 2 | |
| 7 | Water Purifer | Aqua Guard or Reputed company | 2 | |
| 8 | Black & White Board/Ceramic Magnetic Writing Green Board | 3''x4'' | 1 | |
| 9 | Pin up Board | 2''x3'' | 1 | |
| 10 | Computer & Printer with UPS | | 1 | |
| 11 | Overhead Project | | | |
| 12 | Library Books | As per requirement | | |
| | | ** Item No. 1 to 12 Total Rs. | | 2,00,000 |
| | | Grand Total Rs | | 20,00,000 |

* Specilised machines, DG set & Electrical Wiring is restricted to Rs .11,98,000/-

** Furniture is restricted to Rs. 2,00,000/-

**Dr. SHAMLA IQBAL**
Director (SEP) &
E/o Deputy Secretary to Government,
Rural Development & Pan. Raj Dept.,

**ANNEXURE-B**

| Sl. No. | Details | No. s | * Salary per month (Approximate Rs) |
|---|---|---|---|
| I | Teaching Staff | | |
| 1 | Principal cum Senior instructor | 1 | 7,500 |
| 2 | Instructor | 1 | 5,000 |
| 3 | Machine Mechanic | 1 | 4,000 |

| II | Administrative Staff | | |
|---|---|---|---|
| 1 | Accountant | 1 | 3,000 |
| 2 | Data entry Operator | 1 | 2,500 |
| 3 | peon /assistant | 1 | 2,000 |
| | Total | 6 | 24,000 |

* Recurring expenditure is to be met out of assistance from CAPART and honourorium received towards training from RDPR/Other Departments & Own Sources

**Dr. SHAMLA IQBAL**

P.R. 1456

Director (SEP) &

E/o Deputy Secretary to Government,

Rural Development & Pan. Raj Dept.,

**ಇಂಧನ ಸಚಿವಾಲಯ**

**ವಿಷಯ :** ಮುಖ್ಯ ವಿದ್ಯುತ್ ಪರಿವೀಕ್ಷಕರು, ವಿದ್ಯುತ್ ಪರಿವೀಕ್ಷಣಾಲಯ, ಇವರಿಗೆ ಕಛೇರಿ ಉಪಯೋಗಕ್ಕಾಗಿ ಒಂದು ಹೊಸ ವಾಹನವನ್ನು ಖರೀದಿಸುವ ಬಗ್ಗೆ.

**ಓದಲಾಗಿದೆ :** 1 ಮುಖ್ಯ ವಿದ್ಯುತ್ ಪರಿವೀಕ್ಷಕರ ಪತ್ರ ಸಂಖ್ಯೆ:ಮುವಿಪ/ಸಿಸ1/31790/08–09 ದಿನಾಂಕ:12.12.2008.

2. ಮುಖ್ಯ ವಿದ್ಯುತ್ ಪರಿವೀಕ್ಷಕರ ಪತ್ರ ಸಂಖ್ಯೆ:ಮುವಿಪ/ಉವಿಪ(2) ವಾಹನಗಳು/ಸಿಸ1/36762/08–09 ದಿನಾಂಕ:3.2.2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ(1) ಮತ್ತು (2) ರ ಪತ್ರಗಳಲ್ಲಿ ವಿದ್ಯುತ್ ಪರಿವೀಕ್ಷಣಾ ಇಲಾಖಾ ಮುಖ್ಯಸ್ಥರು ಹಾಲಿ ಉಪಯೋಗಿಸುತ್ತಿರುವ ವಾಹನ ಸಂಖ್ಯೆ: ಕೆ.ಎಂ.01 ಜಿ. 2230 ಅಂಬಾಸಿಡರ್ ಕಾರನ್ನು 1995ರಲ್ಲಿ ಖರೀದಿಸಿದ್ದು, ಸದರಿ ವಾಹನವು ಇಲ್ಲಿಯವರೆಗೆ ಸುಮಾರು 3,66,030 ಕಿ.ಮಿ.ಗಳಷ್ಟು ದೂರವನ್ನು ಕ್ರಮಿಸಿದ್ದು, ವಾಹನವು ಮೇಲಿಂದ ಮೇಲೆ ದುರಸ್ಥಿಗೆ ಒಳಪಡುತ್ತಿದ್ದು, ಇಲಾಖಾ ಮುಖ್ಯಸ್ಥರು ರಾಜ್ಯದ ಬೇರೆ ಬೇರೆ ಜಿಲ್ಲೆಗಳಿಗೆ ಪ್ರವಾಸ ಕೈಗೊಳ್ಳಬೇಕಾಗಿದ್ದು, ಅತೀ ಮುಖ್ಯವಾಗಿ ವಿಶೇಷ ಸಂದರ್ಭದಲ್ಲಿ ತುರ್ತು ಪ್ರವಾಸ ಕೈಗೊಳ್ಳುವಂತಹ ಅಂದರೆ, ವಿಶೇಷವಾಗಿ ನ್ಯಾಯಾಲಯಗಳಿಗೆ ಸಾಕ್ಷಿ ನೀಡಲು ಅವಶ್ಯ ಪ್ರವಾಸ ಕೈಗೊಳ್ಳಬೇಕಾದ ಸಂದರ್ಭಗಳು ಹೆಚ್ಚಾಗಿರುವುದರಿಂದ ಹೊಸ ಅಂಬಾಸಿಡರ್ ಕಾರನ್ನು ಖರೀದಿಸುವುದು ಸೂಕ್ತವೆಂದು ಹೊಸ ಮಾಡೆಲ್ ಕಾರನ್ನು ಖರೀದಿಸುವ ಸಲುವಾಗಿ ಮುಖ್ಯ ವಿದ್ಯುತ್ ಪರಿವೀಕ್ಷಕರು ಈ ಕೆಳಗಿನ ಸಂಸ್ಥೆಗಳಿಂದ ಅವರ ಕನಿಷ್ಠ ದರ ಪಟ್ಟಿಯನ್ನು ಪಡೆದು ಸಲ್ಲಿಸಿರುತ್ತಾರೆ.

1) ಮೆ: ಸದರನ್ ಮೋಟರ್ಸ್ ಬೆಂಗಳೂರು –ಅಂಬಾಸಿಡರ್ (ಪೆಟ್ರೋಲ್) ರೂ. 4,78,888/+ವ್ಯಾಟ್ ರೂ. 59861/–

2) ಮೆ: ಸದರನ್ ಮೋಟರ್ಸ್ ಬೆಂಗಳೂರು –ಅಂಬಾಸಿಡರ್ (ಡೀಸೆಲ್) ರೂ. 4,99,900/+ವ್ಯಾಟ್ ರೂ. 62487/–

3) ಮೆ: ಮೆಟ್ರೊ ಪೋರ್ಡ್ ಪಿಯಾಸ್ತ, ಫೋರ್ಡ್ ಪಿಯಸ್ತ (ಪೆಟ್ರೋಲ್) ರೂ, 6,39,111/– +ವ್ಯಾಟ್ ರೂ. 79889/–

ಮೇಲ್ಕಂಡ ಮೂರು ವಾಹನಗಳ ಬಗ್ಗೆ ಅವುಗಳ ಅಧಿಕೃತ ಮಾರಾಟಗಾರರಲ್ಲಿ ವಿಚಾರಿಸಲಾಗಿ ಆ ವಾಹನಗಳು ಹವಾನಿಯಂತ್ರಣ ಮತ್ತು ಆಧುನಿಕ ಸಲಕರಣೆಗಳ ವ್ಯವಸ್ಥೆಯನ್ನು ಹೊಂದಿರುತ್ತದೆ ಎಂದು ತಿಳಿಸಿರುತ್ತಾರೆ. ಅಲ್ಲದೆ ಅಂಬಾಸಿಡರ್ ಡೀಸೆಲ್ ಕಾರು 1ಲೀಟರ್ ಡೀಸೆಲ್ ಗೆ 9 ರಿಂದ 14 ಕಿ.ಮೀ. ಮೈಲೇಜ್‌ನ್ನು ನೀಡುವುದಾಗಿ ತಿಳಿಸಿರುತ್ತಾರೆ.

ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 134 ಶಿವಾನೀ 2006, ದಿನಾಂಕ:25.11.2006 ರ ಆದೇಶದಲ್ಲಿ ಇಲಾಖಾ ಮುಖ್ಯಸ್ಥರಿಗೆ ವಾಹನ ಖರೀದಿಗೆ ರೂ. 6.50 ಲಕ್ಷಗಳು (ತೆರಿಗೆ ಹೊರತುಪಡಿಸಿ) ಗರಿಷ್ಠಮಿತಿಯನ್ನು ನಿಗಧಿಪಡಿಸಿದ್ದು ಅನಧಿಕೃತ ಜ್ಞಾಪನಾ ಪತ್ರ ಸಂಖ್ಯೆ:ಸಿಆಸುಇ 174 ಶಿವಾನೀ 2007 ದಿನಾಂಕ:12.5.2008ರಲ್ಲಿ ಈ ಮಿತಿಯನ್ನು ಪರಿಷ್ಕರಿಸಿ ರೂ. 5 ಲಕ್ಷಗಳಿಗೆ ನಿಗಧಿಪಡಿಸಿದೆ (ತೆರಿಗೆ ಹೊರತುಪಡಿಸಿ), ಪ್ರಸ್ತುತ ವಾಹನದ ಮುಖ ಬೆಲೆಯು ರೂ. 4,99,900/–ಆಗಿದ್ದು, ವ್ಯಾಟ್ ಬೆಲೆ ರೂ. 62,487/– ಆಗಿರುವುದೆಂದು ತಿಳಿಸುತ್ತಾ, ವಾಹನವನ್ನು ಖರೀದಿಸಲು ಸರ್ಕಾರದ ಅನುಮೋದನೆಯನ್ನು ಕೋರಿರುತ್ತಾರೆ. ಮತ್ತು ಅದಕ್ಕಾಗಿ ಒಟ್ಟು ರೂ., 5.65 ಲಕ್ಷಗಳ ಹೆಚ್ಚುವರಿ ಅನುದಾನವನ್ನು ಲೆಕ್ಕ ಶೀರ್ಷಿಕೆ 2045 ಸರಕು ಮತ್ತು ಸೇವೆಗಳ ಮೇಲಣ ತೆರಿಗೆ ಮತ್ತು ಶುಲ್ಕ ಇದರ ಉಪ ಶೀರ್ಷಿಕೆ 195 ಸಾರಿಗೆ ವೆಚ್ಚದಡಿ ಮಂಜೂರು ಮಾಡಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮುಖ್ಯ ವಿದ್ಯುತ್ ಪರಿವೀಕ್ಷಕರವರ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಇಎನ್ 116 ಇಬಿಎಸ್ 2008, ಬೆಂಗಳೂರು, ದಿನಾಂಕ:22ನೇ ಮೇ 2009**

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಮುಖ್ಯ ವಿದ್ಯುತ್ ಪರಿವೀಕ್ಷಕರವರ ಕಛೇರಿ ಉಪಯೋಗಕ್ಕೆ ಸಿ.ಆ.ಸು.ಇ. ಅನಧಿಕೃತ ಟಿಪ್ಪಣಿ ಸಂಖ್ಯೆ:174 ಶಿವಾನೀ 2007, ದಿನಾಂಕ:12.5.2008ರಲ್ಲಿ ಪರಿಷ್ಕರಿಸಿರುವಂತೆ ವಾಹನದ ಮುಖ ಬೆಲೆ ರೂ. 5,00,000/– ಲಕ್ಷಗಳಿಗೆ (ಐದು ಲಕ್ಷ ರೂಪಾಯಿಗಳು ಮಾತ್ರ) (ತೆರಿಗೆ ಹೊರತುಪಡಿಸಿ) ಒಂದು ಹೊಸ ಅಂಬಾಸಿಡರ್ ಕಾರನ್ನು ಖರೀದಿಸಲು ಸರ್ಕಾರ ಅನುಮತಿ ನೀಡಿದೆ.

ನಿಯಮಾನುಸಾರ ಹಳೆ ವಾಹನವನ್ನು ವಿಲೇವಾರಿ ಮಾಡಲು ಸೂಚಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಎಫ್‌ಡಿ 626 ವೆಚ್ಚ–1/09,. ದಿನಾಂಕ:7.5.2009ರ ಸಹಮತಿಯೊಂದಿಗೆ ಹೊರಡಿಸಿದೆ.

**ಪಿ.ಆರ್. 1333** **ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ**

**ಸುಜಾತಮ್ಮ**

ಪೀಠಾಧಿಕಾರಿ, ಇಂಧನ ಇಲಾಖೆ

**ಶಿಕ್ಷಣ ಸಚಿವಾಲಯ**

**ವಿಷಯ:** 2009–10ನೇಸಾಲಿಗೆ ಗ್ರಂಥಾಲಯ ಕಟ್ಟಡಗಳ ದುರಸ್ಥಿ ಮತ್ತು ಹೊಸ ಕಟ್ಟಡಗಳ ನಿರ್ಮಾಣಕ್ಕೆ ಅನುದಾನ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಇಡಿ 76:ಯೋಯೋಕ 2009, ದಿನಾಂಕ: 28.4.2009: ಇಡಿ:61: ಸ್ಲೀಮರ (ಯುನಿಕ್) 2009, ದಿನಾಂಕ:28.4.2009.
2. ಸರ್ಕಾರದ ಆದೇಶ ಸಂಖ್ಯೆ ಇಡಿ:76:ಯೋಯೋಕ[ಭಾಗ–2] 2009, ದಿನಾಂಕ:15.6.2009
3. ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ, ರವರ ಪತ್ರ ಸಂಖ್ಯೆ ಸಾಗ್ರಂಇ/ನಿಕ/ಅವಿ.ಬಿ1/08/2009–10/2007/ದಿನಾಂಕ:1.6.2009.

**ಪ್ರಸ್ತಾವನೆ:**

1 ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ 2009–10ನೇ ಸಾಲಿನ ಸಾರ್ವಜನಿಕ ಗ್ರಂಥಾಲಯಗಳ ಮುಂದುವರಿಕೆ ಕಾರ್ಯಕ್ರಮಕ್ಕೆ ಅನುಮೋದನೆ ನೀಡಿದೆ.

2 ಮೇಲೆ (2) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ 2009–10ನೇ ಸಾಲಿನ ಸಾರ್ವಜನಿಕ ಗ್ರಂಥಾಲಯಗಳ ಮುಂದುವರಿಕೆ ಕಾರ್ಯಕ್ರಮ ಅನುಷ್ಠಾನಕ್ಕಾಗಿ ಶೇ 25ರಷ್ಟು ಅನುದಾನವನ್ನು ಬಿಡುಗಡೆ ಮಾಡಲಾಗಿದೆ. ಅದರಲ್ಲಿ ಲೆಕ್ಕ ಶೀರ್ಷಿಕೆ 2205–00–105–0–15–101ರಡಿ 200.00ಲಕ್ಷರೂಗಳನ್ನು ಒದಗಿಸಿದ್ದು, ಶೇ. 25ರಷ್ಟು ಎಂದರೆ 50.00 ಲಕ್ಷರೂಗಳನ್ನು ಖರ್ಚು ಮಾಡಲು ಅನುಮತಿ ನೀಡಿದೆ.

3 ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ ಬೆಂಗಳೂರು ರವರು, 2009–10ನೇ ಸಾಲಿಗೆ ಲೆಕ್ಕ ಶೀರ್ಷಿಕೆ 2205–00–105–0–15 (ಯೋಜನೆ) ಅಡಿ ಒದಗಿಸಲಾಗಿರುವ 200.00 ಲಕ್ಷರೂಗಳಲ್ಲಿ ಗ್ರಂಥಾಲಯ ಕಟ್ಟಡ ನಿರ್ಮಾಣ ಮತ್ತು ಸೇರ್ಪಡೆ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

4 ಸರ್ಕಾರವು ಪ್ರಸ್ತಾವನೆಯಲ್ಲಿರುವ ಅಂಶವನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಇಡಿ 152:ಯೋಯೋಕ 2009, ಬೆಂಗಳೂರು, ದಿನಾಂಕ:4ನೇ ಜುಲೈ 2009**

**[ಇಡಿ:88:ಸ್ಲೀಮರ (ಯುನಿಕ್) 2009, ದಿನಾಂಕ:4.7.2009]**

5 2009–10ನೇ ಸಾಲಿಗೆ ಲೆಕ್ಕ ಶೀರ್ಷಿಕೆ 2205–00–105–0–15 (ಯೋಜನೆ) ಅಡಿ ಒದಗಿಸಲಾಗಿರುವ 200.00 ಲಕ್ಷರೂಗಳಲ್ಲಿ ಅನುಬಂಧದಲ್ಲಿ ತೋರಿಸಿರುವ ಸ್ಥಳಗಳ ಸಾರ್ವಜನಿಕ ಗ್ರಂಥಾಲಯ ಕಟ್ಟಡ ನಿರ್ಮಾಣ ಮತ್ತು ಸೇರ್ಪಡೆ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಸರ್ಕಾರವು ಅನುಮತಿ ನೀಡಿದ್ದು, ಅದರಲ್ಲಿ ಪ್ರಥಮತಃ ಸರ್ಕಾರದ ಆದೇಶ ಸಂಖ್ಯೆ:ಇಡಿ:76:ಯೋಯೋಕ [ಭಾಗ–2]2009, ದಿನಾಂಕ:15.6.2009ರಲ್ಲಿ ಮೊದಲ ತ್ರೈಮಾಸಿಕ ಕಂತಾಗಿ ಬಿಡುಗಡೆ ಮಾಡಿರುವ ಅನುದಾನವನ್ನು ಬಳಸಿಕೊಂಡು ಕೂಡಲೇ ಕಾಮಗಾರಿಗಳನ್ನು ಪ್ರಾರಂಭಿಸಲು ಕ್ರಮ ಕೈಗೊಳ್ಳುವಂತೆ ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ, ಬೆಂಗಳೂರು ಇವರಿಗೆ ಅನುಮತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಐ.ಎಫ್. ಮಾಗಿ**

ವಿಶೇಷಾಧಿಕಾರಿಗಳು ಮತ್ತು ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಯೋಜನೆ)

**ಸರ್ಕಾರದ ಆದೇಶ ಸಂ:ಇಡಿ 152 ಯೋಯೋಕ 2008 ದಿನಾಂಕ:4.7.2009**

**ಇಡಿ ಸ್ಕೀಮರ 88 ಯುನಿಕ್ 2009 ದಿನಾಂಕ:4.7.2009ಕ್ಕೆ ಅನುಬಂಧ–ಅ**

| ಕ್ರ. ಸಂ. | ಜಿಲ್ಲಾ/ನಗರ ಕೇಂದ್ರ ಗ್ರಂಥಾಲಯ | ಮುಂದುವರೆದ ಕಾಮಗಾರಿ ವಿವರ | ಮೊತ್ತ | |
|---|---|---|---|---|
| 1 | ಜಿಲ್ಲಾ ಕೇಂದ್ರ ಗ್ರಂಥಾಲಯ, ಗದಗ | ಮುಖ್ಯ ಗ್ರಂಥಾಲಯಾಧಿಕಾರಿ, ಜಿಲ್ಲಾ ಕೇಂದ್ರ ಗ್ರಂಥಾಲಯ, ಗದಗ ರವರ ಕಟ್ಟಡ | 20.00 | |
| 2 | ಜಿಲ್ಲಾ ಕೇಂದ್ರ ಗ್ರಂಥಾಲಯ, ರಾಯಚೂರು | ದೇವದುರ್ಗ ಶಾಖಾ ಗ್ರಂಥಾಲಯ ಕಟ್ಟಡ | 35.00 | |
| 3 | ಜಿಲ್ಲಾ ಕೇಂದ್ರ ಗ್ರಂಥಾಲಯ, ಕಾರವಾರ | 05 ಶಾಖಾ ಗ್ರಂಥಾಲಯ ಕಟ್ಟಡಗಳಿಗೆ | 9.13 | |
| 4 | ಜಿಲ್ಲಾ ಕೇಂದ್ರ ಗ್ರಂಥಾಲಯ, ಬಾಗಲಕೋಟೆ | ಮುಧೋಳ ಶಾಖಾ ಗ್ರಂಥಾಲಯ ಕಟ್ಟಡ | 9.41 | |
| 5 | ಜಿಲ್ಲಾ ಕೇಂದ್ರ ಗ್ರಂಥಾಲಯ, ಹಾಸನ | ಅಂಸೀಕೆರೆ ಶಾಖಾ ಗ್ರಂಥಾಲಯ ಕಟ್ಟಡ | 10.00 | |
| 6 | ನಗರ ಕೇಂದ್ರ ಗ್ರಂಥಾಲಯ, ಧಾರವಾಡ | ಹುಬ್ಬಳ್ಳಿ ನಗರದ ಲ್ಯಾಮಿಂಗ್ಟನ್ ರೂಡ್ ಶಾಖಾ ಗ್ರಂಥಾಲಯ ಕಟ್ಟಡ | 28.99 | |
| 7 | ಜಿಲ್ಲಾ ಕೇಂದ್ರ ಗ್ರಂಥಾಲಯ, ಮಂಡ್ಯ | ಕನ್ನಘಟ್ಟ ಶಾಖಾ ಗ್ರಂಥಾಲಯ ಕಟ್ಟಡ | 20.00 | |
| 8 | ಜಿಲ್ಲಾ ಕೇಂದ್ರ ಗ್ರಂಥಾಲಯ, ತುಮಕೂರು | ಹೊನ್ನಶೆಟ್ಟಿಹಳ್ಳಿ ಗ್ರಾಮ ಪಂಚಾಯತ್ ಶಾಖಾ ಗ್ರಂ. ಕಟ್ಟಡ | 5.00 | |
| | | ಒಟ್ಟು ರೂ: | | 137.53 |
| ಗ್ರಂಥಾಲಯ ಕಟ್ಟಡಗಳ ದುರಸ್ತಿ ಕಾಮಗಾರಿಗಳಿಗಾಗಿ | | | | |
| ಕ್ರ. ಸಂ | ಜಿಲ್ಲಾ/ ನಗರ ಕೇಂದ್ರ ಗ್ರಂಥಾಲಯ | ಕಾಮಗಾರಿ ವಿವರ | ಮೊತ್ತ | |
| 1 | ನಗರ ಕೇಂದ್ರ ಗ್ರಂಥಾಲಯ, ಮಂಗಳೂರು | ಮುಖ್ಯ ಗ್ರಂಥಾಲಯಾಧಿಕಾರಿ, ನಗರ ಕೇಂದ್ರ ಗ್ರಂಥಾಲಯ, ಮಂಗಳೂರು ಕಟ್ಟಡ | 4.10 | |
| 2 | ಜಿಲ್ಲಾ ಕೇಂದ್ರ ಗ್ರಂಥಾಲಯ, ಹಾವೇರಿ | ಶಾಖಾ ಗ್ರಂಥಾಲಯ ಕಟ್ಟಡಗಳು | 4.41 | |
| 3 | ಜಿಲ್ಲಾ ಕೇಂದ್ರ ಗ್ರಂಥಾಲಯ, ಮೈಸೂರು | ಹುಣಸೂರು ಶಾಖಾ ಗ್ರಂಥಾಲಯ ಕಟ್ಟಡ | 2.00 | |
| 4 | ಜಿಲ್ಲಾ ಕೇಂದ್ರ ಗ್ರಂಥಾಲಯ, ಬೆಳಗಾವಿ | ಮುಖ್ಯ ಗ್ರಂಥಾಲಯಾಧಿಕಾರಿ, ಜಿಲ್ಲಾ ಕೇಂದ್ರ ಗ್ರಂಥಾಲಯ, ಬೆಳಗಾವಿ ರವರ ಕಟ್ಟಡ | 2.00 | |
| 5 | ಜಿಲ್ಲಾ ಕೇಂದ್ರ ಗ್ರಂಥಾಲಯ, ತುಮಕೂರು | ಕುಣಿಗಲ್ ಶಾಖಾ ಗ್ರಂಥಾಲಯ ಕಟ್ಟಡ | 2.25 | |
| 6 | ಜಿಲ್ಲಾ ಕೇಂದ್ರ ಗ್ರಂಥಾಲಯ, ಗದಗ | ಶಿರಹಟ್ಟಿ ಮತ್ತು ಲಕ್ಷ್ಮೀಶ್ವರ ಶಾಖಾ ಗ್ರಂಥಾಲಯ ಕಟ್ಟಡ | 1.86 | |
| 7 | ಜಿಲ್ಲಾ ಕೇಂದ್ರ ಗ್ರಂಥಾಲಯ, ಕೊಡಗು | ಸೋಮವಾರಪೇಟೆ ಶಾಖಾ ಗ್ರಂ:ಕಟ್ಟಡ | 0.60 | |
| | | ಒಟ್ಟು ರೂ: | | 17.22 |
| ಹೊಸ ಗ್ರಂಥಾಲಯ ಕಟ್ಟಡಗಳ ನಿರ್ಮಾಣಕ್ಕಾಗಿ | | | | |
| ಕ್ರ ಸಂ | ಜಿಲ್ಲಾ /ನಗರ ಕೇಂದ್ರ ಗ್ರಂಥಾಲಯ | ಕಾಮಗಾರಿ ವಿವರ | ಮೊತ್ತ | |
| 1 | ಜಿಲ್ಲಾ ಕೇಂದ್ರ ಗ್ರಂಥಾಲಯ, ಬಳ್ಳಾರಿ | ಮುಖ್ಯ ಗ್ರಂಥಾಲಯಾಧಿಕಾರಿ, ಜಿಲ್ಲಾ ಕೇಂದ್ರ ಗ್ರಂಥಾಲಯ, ಬಳ್ಳಾರಿ ರವರ ಕಟ್ಟಡ | 10.00 | |
| 2 | ನಗರ ಕೇಂದ್ರ ಗ್ರಂಥಾಲಯ, ದಾವಣಗೆರೆ | ಮುಖ್ಯ ಗ್ರಂಥಾಲಯಾಧಿಕಾರಿ, ನಗರ ಕೇಂದ್ರ ಗ್ರಂಥಾಲಯ, ದಾವಣಗೆರೆ ರವರ ಕಟ್ಟಡ ವಿಸ್ತರಣೆಗಾಗಿ | 5.00 | |
| 3 | ಜಿಲ್ಲಾ ಕೇಂದ್ರ ಗ್ರಂಥಾಲಯ, ರಾಮನಗರ | ಮಾಗಡಿ ಶಾಖಾ ಗ್ರಂಥಾಲಯ ಕಟ್ಟಡ | 5.00 | |
| 4 | ಜಿಲ್ಲಾ ಕೇಂದ್ರ ಗ್ರಂಥಾಲಯ, ಕಾರವಾರ | ಹೊನ್ನಾವರ ಶಾಖಾ ಗ್ರಂಥಾಲಯ ಕಟ್ಟಡ | 5.25 | |

| | | | | |
|---|---|---|---|---|
| 5 | ನಗರ ಕೇಂದ್ರ ಗ್ರಂಥಾಲಯ, ಚಿತ್ರದುರ್ಗ | ಸ್ಪರ್ಧಾತ್ಮಕ ಪರೀಕ್ಷಾ ಅಧ್ಯಯನ ಕೇಂದ್ರ | 10.00 | |
| 6 | ಜಿಲ್ಲಾ ಕೇಂದ್ರ ಗ್ರಂಥಾಲಯ, ಮೈಸೂರು | ಮುಖ್ಯ ಗ್ರಂಥಾಲಯಾಧಿಕಾರಿ, ಜಿಲ್ಲಾ ಕೇಂದ್ರ ಗ್ರಂಥಾಲಯ, ಮೈಸೂರು ರವರ ಕಟ್ಟಡ | 10.00 | |
| | | ಒಟ್ಟು ರೂ: | | 45.25 |
| | | ಒಟ್ಟು ಅನುದಾನ ರೂ. 200.00 ಲಕ್ಷಗಳು | | 200.00 |

ಐ.ಎಫ್. ಮಾಗಿ
ಪಿ.ಆರ್.1509
ವಿಶೇಷಾಧಿಕಾರಿಗಳು ಮತ್ತು ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಯೋಜನೆ)

## ವಸತಿ ಸಚಿವಾಲಯ

**ವಿಷಯ :** ಶಿರಗುಪ್ಪ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ :** ಸರ್ಕಾರದ ಆದೇಶ ಸಂ.ವಇ/42/ಹೆಚ್ಎಎಂ/1999, ದಿನಾಂಕ:10.5.2000

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ ಓದಲಾದ ಆದೇಶದನ್ವಯ, ವಿಧಾನಸಭಾ ಕ್ಷೇತ್ರವಾರು ಪುನರ್ರಚಿಸಲು ತೀರ್ಮಾನಿಸಿದ್ದು, ಅದರಂತೆ ಶಿರಗುಪ್ಪ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ.ವಇ 68 ಹೆಚ್ಎಎಸ್ 2008, ಬೆಂಗಳೂರು, ದಿನಾಂಕ:29ನೇ ಜೂನ್ 2009**

ಶಿರಗುಪ್ಪ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರಿಗೆ ಆಶ್ರಯ ಸಮಿತಿಯನ್ನು ಪುನರ್ರಚಿಸಲಾಗಿದೆ.

| | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1 | ಶ್ರೀ ಗೌರೀಶ್ ಬಿನ್ ವಿಶ್ವಮೂರ್ತಿ, ಚಿಂಪಗ, ಶಿರಗುಪ್ಪ | ಹಿಂದುಳಿದ ವರ್ಗ |
| 2 | ಶ್ರೀ ವಿ. ನಟರಾಜ್ ಬಿನ್ ಅರ್ತ್ಯಪ್ಪ ವಡ್ಡರು, ಶಿರಗುಪ್ಪ | ಪರಿಶಿಷ್ಟ ಜಾತಿ |
| 3 | ಶ್ರೀಮತಿ ಲಕ್ಷ್ಮೀ ಕೋಂ ಕೆ. ರಾಘವೇಂದ್ರ, ಶಿರಗುಪ್ಪ | ಸಾಮಾನ್ಯ (ಮಹಿಳೆ) |
| 4 | ಶ್ರೀ ಟಿ.ಸಿ. ಮೋಹನ್ ಬಿನ್ ಚನ್ನಬಸಪ್ಪ, ಶಿರಗುಪ್ಪ | ಅಲ್ಪಸಂಖ್ಯಾತರು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಪಿ.ಆರ್. 1646
ಕೆ.ಆರ್. ವಲ್ಲೂರ
ಪೀಠಾಧಿಕಾರಿ–2, ವಸತಿ ಇಲಾಖೆ

**ವಿಷಯ :** ಯಲಬುರ್ಗಾ ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ :** ಸರ್ಕಾರದ ಆದೇಶ ಸಂ.ವಇ/42/ಹೆಚ್ಎಎಂ/1999, ದಿನಾಂಕ:10.5.2000

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ ಓದಲಾದ ಸರ್ಕಾರದ ಆದೇಶದನ್ವಯ, ವಿಧಾನಸಭಾ ಕ್ಷೇತ್ರವಾರು ಪುನರ್ರಚಿಸಲು ತೀರ್ಮಾನಿಸಿದ್ದು, ಅದರಂತೆ ಯಲಬುರ್ಗಾ ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ.ವಇ 45 ಹೆಚ್ಎಎಸ್ 2009, ಬೆಂಗಳೂರು, ದಿನಾಂಕ:30ನೇ ಜೂನ್ 2009**

ಕೊಪ್ಪಳ ಜಿಲ್ಲೆಯ ಯಲಬುರ್ಗಾ ಪಟ್ಟಣ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರಿಗೆ ಆಶ್ರಯ ಸಮಿತಿಯನ್ನು ಪುನರ್ರಚಿಸಲಾಗಿದೆ.

| | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1 | ಶ್ರೀ ವೆಂಕಟೇಶ ಹಾದರಮಗ್ಗಿ, ಹಿರೇವಂಕಲಕುಂಟಾ, ಯಲಬುರ್ಗಾ ತಾಲ್ಲೂಕು | ಪರಿಶಿಷ್ಟ ಪಂಗಡ |
| 2 | ಶ್ರೀ ರವಿ ಹನುಮಂತಪ್ಪ ಜಕ್ಕ, ಕುಕನೂರ, ಯಲಬುರ್ಗಾ ತಾಲ್ಲೂಕು | ಹಿಂದುಳಿದ ವರ್ಗ |
| 3 | ಶ್ರೀ ನೂರ್ ಅಹ್ಮದಸಾಬ, ಅಮೀನಸಾಬ, ಹಣಜಗೇರಿ, ಕುಕನೂರ, ಯಲಬುರ್ಗಾ | ಅಲ್ಪಸಂಖ್ಯಾತ |
| 4 | ಶ್ರೀಮತಿ ಪ್ರತಿಭಾ ಸಂಗಯ್ಯ ಯಾವಗಲ್ ಮಠ, ಮುಧೋಳ, ಯಲಬುರ್ಗಾ ತಾಲ್ಲೂಕು | ಬಹುಸಂಖ್ಯಾತ (ಮಹಿಳೆ) |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಪಿ.ಆರ್. 1647
ಕೆ.ಆರ್. ವಲ್ಲೂರ
ಪೀಠಾಧಿಕಾರಿ–2, ವಸತಿ ಇಲಾಖೆ

## PERSONNEL AND ADMINISTRATIVE REFORMS SECRETARIAT

**Sub :** Right to Information Act, 2005-Submission of reports to State Information Commission

**Read :** 1) Letter No. 1/12/2008-IR dated 23rd June 2008 from the Director, Government of India, Ministry of Personnel, Public Grievances and Pensions, (Departement of Personnel and Training), New Delhi.

**Government Order No. DPAR 91 RTI 2008 , Bangalore, Dated:30th October, 2008.**

In the letter read above, Government of India, has advised the State Government to request all Secretariat Departments to issue instructions to the Heads of Departments and Public Authorities under their control to maintain Registers at Public Information Officer level and 1st Appeallate Authority level respectively and furnish information in the prescribed proforma to the respective Officers duly indicating the date. The reports should be submitted at each level so as to enable the State Information Commission to prepare its Annual Report and place the same before the State Legislature.

Under Section 25(1) of the Right to Information Act, 2005, the State Information Commission at the end of each year shall prepare a report on the implementation of the Act.

Under Section 24(1), a copy of the report of the State Information Commission shall be laid before the Houses of the State Legislature.

Under Section 25(2), each Department shall, in relation to the Public Authorities within their jurisdiction, collect and furnish information to the State Information Commission, For this Purpose Government prescribe the procedure as envisaged in Annexure-I and prescribe the revised proforma Registers I and II and Proforma reports A,B,C, & D as Annexure-II and III to this Order.

The Principal Secretaries and Secretaries to Government are requested to issue instructions to the Heads of Departments and public authorities under their control to maintain information relating to Right to Information in the prescribed registers and for timely submission of the information in the prescribed proforma. Furhter, the principal Secretaries and Secretaries to Government are requested to furnish the consolidated information pertaining to their department (information pertaining to Secretaries, Heads of Departments, Boards and Corporations and Public Authorities under their control) in the prescribed formats to the State Information Commission regularly so as to enable the Commission to prepare its Annual Report well in time and place the same before both the Houses of Legislature.

By order and in the name of the Governor of Karnataka

**B. KAMALAMMA**

P.R. 1558

Under Secretary to Government

Department of Personnel and Administrative Reforms

(Janaspandana Cell)

## KARNATAKA LEGISLATIVE COUNCIL SECRETARIAT

**Sub :** Participation of the Principal Secretary, Karnataka Legislature in the 30th Anniversery of China's Adoption of reforms to be held at Nanjing as a member of the Karnataka Legislature delegation headed by the Hon'ble Speaker.

**Read :**
1) Letter dated 3rd September 2008 from the Member of the Standing Committee, Director General of the Foreign Affairs Committee, Jiangsu Provincial Peoples's Congress,
2) Itinerary of the Hon'ble Speaker & others from 28.10.08 to 08-11-08

**PREAMBLE:**

The Foreign Affairs Committee of Jiangsu Provincial People's Congress, China has invited the Hon'ble Speaker and his wife along with the following members of Karnataka Legislative Assembly and the Principal Secretary, Karnataka Legislature to participate in the Grand Celebrations to be held at Nanjing on 29.10.2008 to commemorate the 30th Anniversary of China's adoption of the Reforms and opening –up policies and of the start of Jiangsu's establishmnent of sister relationship with its international counter parts:

1 Sri Jagadish Shetter, Hon'ble Speaker
Karnataka Legislative Assembly
2 Smt. Shilpa Shetter, W/o Hon'ble Speaker
3 Sri Appasaheb Mallappa Pattanna Shetty,
Member, Karnataka Legislative Assembly
4 Sri Bellad Chandrakanth Gurappa
Member, Karnataka Legislative Assembly
5 Sri N. Yogish Bhat
Member, Karnataka Legislative Assembly
6 Sri B. Ramanath Rai
Member, Karnataka Legislative Assembly
7 Sri Shashil G. Namoshi
Member, Karnataka Legislative Council
8 Sri D' Souza Robinson
Principal Secretary, Karnataka Legislature.

The Special Board, Karnataka legislature has approved the China Tour of the Hon'ble Speaker along with his wife and the above members of Karnataka Legislative Assembly / Council and the principal Secretary, Karnataka Legislature to participate in the said celebrations.

The Hon'ble Speaker has desired to undertake a Study Tour of some provinces in China and Hong Kong along with other members before and after his participation in the celebrations at Jiangsu.The entire tour will be for a period of 10 days from 28.10.08 to 8.11.08 including traveling time .The entire expeenditure in this regard will be borne by the Karnataka Legislature Secretariat.

The approximate expenditure in connection with this tour will be Rs. 1.84 lakh per person (Rupees One Lakh eighty four thousand only).

**Order No. CPA/84/China Tour/2008, Bangalore, Dated:24th October 2008**

The Special Board, Karnataka Legislature has approved the China Tour of the Hon'ble Spaker along with his wife and above members of Karnataka Legislative Assembly / Council and the Principal Secretary, Karnataka Legislature to participate in the Grand celebrations to be held at Nanjing on 29.10.2008 to commemorate the 30th Anniversary of China's adoption of the Reforms and opening-up policies and of the start of jiangsu's establishment of sister relationship with its international counter parts. The delegation consists of the Hon'ble Speaker, his wife, Four Members of Karnataka Legislative Assembly and the Principal Secretary, Karnataka Legislature.

The delegation's Tour of China is for a period of 10 days from 28-10-08 to 8-11-08 Sanction is accorded for the payment of the admissible amount of advance out of the estimated travel expense of Rs. 1,83,997/-to Shri D'Souza Robinson, Principal Secretary, Karnataka Legislature Subject to adjustment

in the final T.A. Bill after the completion of China Tour. The expenditure on this account is debitable to the head of account 2011-02-103-2-01-KLCS 041 travel expenses (Voted)

.

By order and in the name of the Special Board

P.R. 1519

**N. BALAGURU**

Under Secretary, Karnataka Legislative Council

**HORTICULTURE SECRETARIAT**

**Sub :** ''Centrally Sponsored Scheme on Micro Irrigation'' Implementation during 2008-09/ reg

**Read :**
1) G.O. No. AHD 31 HPP 2006 dated:29.6.2006
2) G.O.No. AHD 125 HPP 2007 dated:26.7.2007
3) Letter of Director of Horticulture No. DH/JD (drip/AHO/5/2007-08/3280 dated 13.5.2008
4) GOI letter F.No. 11-12/2006-Hort dated:2.6.2008
5) GOI letter F.No. 20-4/2007-Hort dated 20-6-2008
6) Letter of Director of Horticulture No. DH/JD(drip)/AHO/1/4/2008-09/3280 dated:30.6.2008.

**PREAMBLE:**

In the letter read at (4) above Government of India has communicated that the Executive Committee regarding Micro Irrigation in its meeting held on 12th May 2008 at New Delhi, has approved the Annual Action Plan (AAP) of Karnataka for the year 2008-09 The Government of India share to be provided under ''Centrally Sponsored Scheme on Micro Irrigation ''will be Rs 4239.72 lakhs. The following is the break up:

| **Components** | **Recommendations** | |
|---|---|---|
| | **Phy. (Ha)** | **Fin (Lakh Rs)** |
| **Horticultural Crops** | | |
| Drip | 27413 | 4161.32 |
| Sprinkler | 607 | 36.42 |
| Demonstration | 0 | 0.00 |
| Sub Total | 28020 | 4197.74 |
| Admn Cost@ 1% | | 41.98 |
| **Grand Total** | **28020** | **4239.72** |

2. The Director of Horticulture vide letter read at (6) above has informed that, in order to utilize the Central share of Rs. 4239.72 lakhs there is a requirement of State share of Rs. 4089.44 lakhs. Further, he has requested that administrative approval with the subsidy pattern of 2007-08 be given by the State Government for the total amount of Rs. 8329.16 lakhs.

3. Government of India vide letter read at (5) above has transferred electronically, an amount of Rs. 785.04 lakhs to Deputy Directors of Horticulture (ZP) of 17 districts of the State towards releases for implementation of the Centrally Sponsored Scheme on Micro Irrigation during 2008-09, The State Government shall have to release its State share in the ratio of 80:20. Government of India stipulates that 50% subsidy be given to all farmers. However, the State Government has been providing a subsidy of 100% in Bijapur and Kolar districts and subsidy of 75% in other districts. Hence,Government of India and Government of Karnataka sharing will be 40:60 and 40:35, respectively. The Director of Horticulture has

requested to release an amount of Rs. 773.83 lakhs towards the State share in order to match the First installment released by Government of India for the year 2008-09.

4. The Director of Horticulture vide letter read at (3) above has informaed that during 2007-08 Government of India had released Rs. 4685.84 lakhs for which the corresponding State share required was Rs. 4627.15 lakhs But, the State share released as on 31.3.2008 had been Rs. 3338.30 lakhs and therefore, a balance of Rs. 1288.85 lakhs State share is to be released.

5. During 2008-09, a total amount of Rs. 4213.76 lakhs has been provided in the budget towards State share as given below:

| Sheme | Amount (Lakh Rs) |
|---|---|
| Drip irrigation-special subsidy for horticultural crops (2401-00-108-2-30)-District sector | 1213.76 |
| Central Sector Scheme for Drip Irrigation (2401-00-108-2-30-059-Other Expenses)- State Sector | 3000.00 |
| **Total** | **4213.76** |

6. Finance Department has informed that Rs. 831.50 lakhs has been released under District Sector in two installments vide its Note No.ಆಇ 243 ವೆಚ್ಚ -4/08 dated 25.7.2008.

7. During 2006-07 and 2007-08, vide Government Orders read at (1) and (2) above, respectively, the scheme was implemented by providing 100% subsidy in Kolar and Bijapur districts and 75% subsidy in the remaining district subject to a limit of 2 hectares. Government of India releases its share directly to the implementing agency (IA) through Electronic Clearance System/Demand Draft to the Bank accounts of the Deputy Directors of Horticulture (ZP). The State share released to ZP 's is drawn by grant-in-aid bill and it will be deposited to the bank account of Micro Irrigation Mission at district level into which Government of India share has already been deposited. Together the funds are utilized for implementation of scheme by the Deputy Directors of Horticulture (ZP).

8. The matter of giving administrative approval to the said scheme during the year 2008-09 with the existing pattern of subsidy, procedures and available budget has been examined and hence this order.

**Government Order No. AHD 63 HPP 2008, Bangalore, Dated:15th September 2008**

Government is pleased to accord administrative approval for the Implementation of the ''Drip Irrigation-Special subsidy for horticulture crops'' Head of Account 2401-00-108-2-30 as a district sector scheme during the year 2008-09 on Mission Mode.

2. The total outlay for the scheme will be Rs. 8329.16lakhs. Out of this, Rs. 4239.72 lakhs will be the Central share and Rs. 4089.44 lakhs will be the State share. The State share includes the State contribution to match the Government of India share and the State's commitment towards enhanced subsidy. The following are the components

| Sl.No | Component | Sharing Pattern (Lakhs Rs) | | | Area (in Ha) |
|---|---|---|---|---|---|
| | | GOI | State | Total | |
| 1 | Drip Irrigation | 4161.32 | 4080.34 | 8241.66 | 27413 |
| 2 | Sprinkler Irrigation | 36.42 | 9.10 | 45.52 | 607 |
| | **Sub Total** | **4197.74** | **4089.44** | **8287.18** | |
| 3 | Administive Cost@ 1%of | 41.98 | - | 41.98 | |
| | **Grand Total** | **4239.72** | **4089.44** | **8329.16** | **28020** |

3. The subsidy under the scheme for **2008–09** will be as below

**a) Drip Irrigation:** Subsidy will be provided at the rate of 75% all over the state and 100% in Bijapur and Kolar districts to all categories of farmers up to an extent of 2 hectares per beneficiary family. The subsidy will be 50% up to an extent between 2 ha. And 5 ha. As per Government of India guidelines.

**b) Sprinkler Irrigation :** Subsidy will be provided at the rate of 50% up to an extent of 5 ha. all over the State. However, Sprinkler Irrigation will be applicable only for those crops where drip irrigation is uneconomical.

4. The Director of Horticulture shall issue operational guidelines along with physical and financial targets for each district. He shall release corresponding State share to each district as and when Central Government releases the funds after confirming that the funds are accounted as outstanding balance available in the respective Bank Account. The releases will be limited to the State share requirement as against Government of India releases.

5. The scheme shall be implemented strictly as per the operational guidelines issued by Government of India, guidelines issued at the time of giving administrative approval and approval for the Annual Action Plan. The implementation of the scheme is subject to the availability of funds.

6. An amount of Rs. 15.00 crores (Rupees Fifteen Crores only) is released to the Director of Horticulture under the Head of Account 2401-00-108-2-30 (Plan) in the State sector. Before seeking further releases the Director of Horticulture shall furnish the Utilization Certificate for the amount relesed under State sector and District sector along with the details of Government of India release during the current year.

7. This order issues with the concurrence of Finance Department vide its Note No. FD 243 EXP-IV/2008 dated11.9.2008.

By order and in the name of the Governor of Karnataka

**S. RAJU**

P.R. 1353

Under Secretary to Government,

Horticulture Department

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಎಂ.ಬಿ. ಯಂಕಂಚಿ, ನಿವೃತ್ತ ಸರ್ಕಾರಿ ಅಭಿಯೋಜಕರು, ಇವರಿಗೆ ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳ ನಿಯಮ 247 (ಎ) (1)ರ ಪ್ರಕಾರ ನಿವೃತ್ತಿ ವೇತನಕ್ಕೆ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಸೇರ್ಪಡೆಗೆ ಪರಿಗಣಿಸುವ ಕುರಿತು.

**ಓದಲಾಗಿದೆ**

1) ಸರ್ಕಾರದ ಅಧಿಸೂಚನೆ ಸಂ:ಲಾ 229 ಪಿಪಿಇ 81, ದಿನಾಂಕ:24.2.1982
2) ಸರ್ಕಾರದ ಆದೇಶದ ಸಂ. ಲಾ 187 ಪಿಪಿಇ 84, ದಿನಾಂಕ:19/22.09.1984
3) ಸದರಿ ಅಧಿಕಾರಿಯವರ ಮನವಿ ದಿನಾಂಕ:7.12.2007
4) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ:ಡಿಪಿಎನ್/ಲೆಕ್ಕ–1/285/2006–07, ದಿನಾಂಕ:9.1.2008

**ಪ್ರಸ್ತಾವನೆ:**

ಶ್ರೀ ಎಂ.ಬಿ. ಯಂಕಂಚಿ, ನಿವೃತ್ತ ಸರ್ಕಾರಿ ಅಭಿಯೋಜಕರು, ಇವರು ಮೇಲೆ (1)ರಲ್ಲಿ ಓದಲಾದ ದಿನಾಂಕ 24.2.1982 ರ ಸರ್ಕಾರದ ಅಧಿಸೂಚನೆ ಕ್ರ.ಸಂ. 11ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ:5.3.1982 ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ನಿವೃತ್ತ ಅಧಿಕಾರಿಯವರ ಜನ್ಮ ದಿನಾಂಕ:1.6.1949 ಆಗಿದ್ದು, ಸದರಿಯವರ ಜನ್ಮ ದಿನಾಂಕವನ್ನು ಮೇಲೆ (2)ರಲ್ಲಿ ಓದಲಾದ ದಿನಾಂಕ:19/22–09–1984 ರ ಸರ್ಕಾರದ ಆದೇಶದಲ್ಲಿ ಒಪ್ಪಲಾಗಿದೆ.

ಸದರಿ ನಿವೃತ್ತ ಅಧಿಕಾರಿಯು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ, ಸದರಿಯವರು ದಿನಾಂಕ:5.3.1982 ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆಂದು, ಸದರಿಯವರ ಜನ್ಮ ದಿನಾಂಕವನ್ನು 1.6.1949 ಎಂದು ಸರ್ಕಾರವು ಒಪ್ಪಿರುತ್ತದೆಂದು ತಿಳಿಸಿರುತ್ತಾರೆ. ಸದರಿಯವರು ಅವರ 32 ವರ್ಷ 9 ತಿಂಗಳು 4 ದಿನಗಳ ವಯಸ್ಸಿನ್ನಲಿ ಸರ್ಕಾರಿ ಸೇವೆಗೆ ಸೇರಿದಂತೆ ಆಗಿರುತ್ತದೆ. ಆದ್ದರಿಂದ, ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಯ ನಿಯಮ 247 (ಎ)(1) ಹೆಚ್ಚುವರಿ ಸೇವೆಯನ್ನು ಸದರಿಯವರ ಅರ್ಹತಾದಾಯಕ ಸೇವೆಯಲ್ಲಿ ಸೇರ್ಪಡೆ ಮಾಡಲು ಆದೇಶವನ್ನು ಹೊರಡಿಸಬೇಕೆಂದು ಮತ್ತು ಸದರಿ ಆದೇಶದ ಪ್ರತಿಯನ್ನು ಮಹಾಲೇಖಪಾಲರಿಗೆ ಕಳುಹಿಸಿಕೊಡಬೇಕೆಂದು ಕೋರಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು, ಇವರು, ಶ್ರೀ ಎಂ.ಬಿ. ಯಂಕಂಚಿ, ನಿವೃತ್ತ ಸರ್ಕಾರಿ ಅಭಿಯೋಜಕರು, ಇವರು ದಿನಾಂಕ:5.3.1982 ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಹಾಜರಾಗಿರುತ್ತಾರೆ ಇವರ ಜನ್ಮ ದಿನಾಂಕ:1.6.1949 ಆಗಿರುತ್ತದೆ. ಸದರಿ ಅಧಿಕಾರಿಯು ಅವರ 32 ವರ್ಷ 9 ತಿಂಗಳು 4 ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿರುವುದರಿಂದ ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಯ ನಿಯಮ 247 (ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕೆ ಎರಡು ವರ್ಷಗಳ ಸೇವೆಯನ್ನು ಹೆಚ್ಚುವರಿಯಾಗಿ ಸದರಿ ಅಧಿಕಾರಿಯ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಸರ್ಕಾರವು ಆದೇಶವನ್ನು ಹೊರಡಿಸಬಹುದೆಂದು ಶಿಫಾರಸ್ಸನ್ನು ಮಾಡಿರುತ್ತಾರೆ. ಸದರಿ ಆದೇಶದ ಪ್ರತಿಯನ್ನು ಮಹಾಲೇಖಪಾಲರ ಕಛೇರಿಗೆ ಮತ್ತು ಸಂಬಂಧಪಟ್ಟ ಅಧಿಕಾರಿಗೆ ಕಳುಹಿಸಿಕೊಡಬೇಕೆಂದು ಕೋರಿರುತ್ತಾರೆ.

ಆದುದರಿಂದ ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 26 ಪಿಪಿಇ 2008, ಬೆಂಗಳೂರು, ದಿನಾಂಕ:5ನೇ ಜನವರಿ 2009**

ಶ್ರೀ ಎಂ.ಬಿ. ಯಂಕಂಚಿ, ನಿವೃತ್ತ ಸರ್ಕಾರಿ ಅಭಿಯೋಜಕರು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1) ರನ್ವಯ ಎರಡು ವರ್ಷಗಳ ಅಧಿಕ ಸೇವಾ ಹೆಚ್ಚಳವನ್ನು ಶ್ರೀಯುತರ ಪಿಂಚಣಿ ಸೌಲಭ್ಯಗಳಿಗೆ ಮಾತ್ರ ಹೆಚ್ಚುವರಿ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಸರ್ಕಾರವು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆ (ವಿಶ್ರಾಂತಿ ವೇತನ) ಯ ಟಿಪ್ಪಣಿ ಸಂ:ಆಇ 33 ವೆಚ್ಚ–11/2008, ದಿನಾಂಕ:10.12.2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 274

**ಕೆ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಕಾ ಮತ್ತು ಸು ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

## ವಸತಿ ಸಚಿವಾಲಯ

**ವಿಷಯ :** ಬೀದರ್ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ :** ಸರ್ಕಾರದ ಆದೇಶ ಸಂ. ವಇ 42 ಹೆಚ್‌ಎಎಂ 1999 ದಿನಾಂಕ:10.5.2000

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ ಓದಲಾದ ಸರ್ಕಾರದ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ರಚಿಸಲು ತೀರ್ಮಾನಿಸಿದ್ದು, ಅದರಂತೆ ಬೀದರ್ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ. ವಇ 9 ಹೆಚ್‌ಎಎಸ್ 2008, ಬೆಂಗಳೂರು, ದಿನಾಂಕ:17ನೇ ಫೆಬ್ರವರಿ, 2009**

ಬೀದರ್ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ರಚಿಸಲಾಗಿದೆ.

| | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1 | ಶ್ರೀ ರಾಮಣ್ಣ ಬಿನ್ ರೇವಪ್ಪ ಶೇರಿಕಾರ, ಇಡಬ್ಲುಎಸ್ 42, ಹುಡಕೊ ಕಾಲೋನಿ, ಶಿವನಗರ (ದಕ್ಷಿಣ), ಬೀದರ್ | ಎಸ್.ಸಿ |
| 2 | ಶ್ರೀ ಹಣಮಂತಪ್ಪ ಪಾಟೀಲ್, ಗ್ರಾಮ ತಾಜಲಪುರ, ತಾಲ್ಲೂಕು ಬೀದರ್ | ಸಾಮಾನ್ಯ |
| 3 | ಶ್ರೀಮತಿ ಲಕ್ಷ್ಮೀಬಾಯಿ ಕೋಂ ಸುಭಾಷ ಚೋಳಕರ, ಚೌಬಾರ ಹತ್ತಿರ, ಬೀದರ್ | ಒ.ಬಿ.ಸಿ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 677

**ಕೆ. ಆರ್. ವಲ್ಲೂರ**

ಪೀಠಾಧಿಕಾರಿ–2, ವಸತಿ ಇಲಾಖೆ

**ವಿಷಯ :** ಗಜೇಂದ್ರಗಡ ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ

**ಓದಲಾಗಿದೆ :** ಸರ್ಕಾರದ ಆದೇಶ ಸಂ ವಇ 42 ಹೆಚ್ಎಎಂ 1999 ದಿನಾಂಕ:10.5.2000

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ ಓದಲಾದ ಸರ್ಕಾರದ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್‌ರಚಿಸಲು ತೀರ್ಮಾನಿಸಿದ್ದು, ಅದರಂತೆ ಗಜೇಂದ್ರಗಡ ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ. ವಇ 64 ಹೆಚ್ಎಎಸ್ 2008, ಬೆಂಗಳೂರು, ದಿನಾಂಕ:31ನೇ ಡಿಸೆಂಬರ್ 2008**

ಗಜೇಂದ್ರಗಡ ಪಟ್ಟಣ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್‌ರಚಿಸಲಾಗಿದೆ.

| | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1 | ಶ್ರೀ ಚಂಬಣ್ಣ ನಿಂಗಪ್ಪ ಚವಡಿ, ಸಾ. ಗಜೇಂದ್ರಗಡ, ರೋಣ ತಾಲ್ಲೂಕು | ಸಾಮಾನ್ಯ |
| 2 | ಶ್ರೀ ಗೋಪಾಲ ಲಾಳಿ, ಸಾ. ಗಜೇಂದ್ರಗಡ, ರೋಣ ತಾಲ್ಲೂಕು | ಒ.ಬಿ.ಸಿ |
| 3 | ಶ್ರೀ ಶಿವಪ್ಪ ಕನಕಪ್ಪ ಚಲವಾದಿ, ಸಾ, ಗಜೇಂದ್ರಗಡ, ರೋಣ ತಾಲ್ಲೂಕು | ಎಸ್.ಸಿ |
| 4 | ಶ್ರೀಮತಿ ದಾವಲಬಿ ಕೋಂ ಶಾಮೀದಸಾಬ ದಿಂಡವಾಡ, ಸಾ. ಗಜೇಂದ್ರಗಡ, ರೋಣ ತಾಲ್ಲೂಕು | ಮಹಿಳೆ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 221

**ಕೆ. ಆರ್. ವಲ್ಲೂರ**

ಪೀಠಾಧಿಕಾರಿ–2, ವಸತಿ ಇಲಾಖೆ

**ವಿಷಯ:** ಹಾನಗಲ್ ಪಟ್ಟಣ ಆಶ್ರಯ ಸಮಿತಿಗೆ ಅಧ್ಯಕ್ಷರ ಮತ್ತು ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ

**ಓದಲಾಗಿದೆ** ಸರ್ಕಾರದ ಆದೇಶ ಸಂ ವಇ 42 ಹೆಚ್ಎಎಂ 1999 ದಿನಾಂಕ:10.5.2000

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ ಓದಲಾದ ಸರ್ಕಾರದ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್‌ರಚಿಸಲು ತೀರ್ಮಾನಿಸಿದ್ದು, ಕ್ಷೇತ್ರದ ಶಾಸಕರಾದ ಶ್ರೀ ಸಿ.ಎಂ. ಉದಾಸಿ, ಮಾನ್ಯ ಲೋಕೋಪಯೋಗಿ ಸಚಿವರು ಶ್ರೀ ಸುರೇಶ್ ಹನುಮಂತಪ್ಪ ರಾಯಕರ್, ಹಾನಗಲ್ ಇವರನ್ನು ಹಾನಗಲ್ ಪಟ್ಟಣ ಆಶ್ರಯ ಸಮಿತಿಯ ಅಧ್ಯಕ್ಷರ ಹುದ್ದೆಗೆ ಕೋರಿದ್ದು, ಹಾನಗಲ್ ಪಟ್ಟಣ ಆಶ್ರಯ ಸಮಿತಿಗೆ ಅಧ್ಯಕ್ಷರನ್ನು ಮತ್ತು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ. ವಇ 34 ಹೆಚ್ಎಎಸ್ 2008, ಬೆಂಗಳೂರು, ದಿನಾಂಕ:31ನೇ ಡಿಸೆಂಬರ್ 2008,**

ಹಾನಗಲ್ ಪಟ್ಟಣ ಆಶ್ರಯ ಸಮಿತಿಗೆ ಶ್ರೀ ಸುರೇಶ್ ಹನುಮಂತಪ್ಪ ರಾಯ್ಕರ್, ಹಾನಗಲ್ ಇವರನ್ನು ಅಧ್ಯಕ್ಷರ ಹುದ್ದೆಗೆ ಮತ್ತು ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಮದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್‌ರಚಿಸಲಾಗಿದೆ.

| | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1 | ಶ್ರೀ ಮೊಹಿನುದ್ದೀನ್ ಅಬ್ದುಲ್ ಕರೀಂಸಾಬ್ ತಾಸೇದ, ಹಾನಗಲ್ | ಅಲ್ಪಸಂಖ್ಯಾತ |
| 2 | ಶ್ರೀ ಶಿವಯೋಗಿ ಸಿದ್ದಲಿಂಗಯ್ಯ ಅರಳಿಮಠ್, ಹಾನಗಲ್ | ಸಾಮಾನ್ಯ |
| 3 | ಶ್ರೀ ಪರಶುರಾಮ್ ನಿಂಗಪ್ಪ ಹುಳ್ಳಿಕಾಶಿ, ಹಾನಗಲ್ | ಪ.ಜಾತಿ |
| 4 | ಶ್ರೀಮತಿ ಮಂಜುಳಾ ಅಶೋಕ ಸುಲಾಖೆ, ಹಾನಗಲ್ | ಹಿಂ. ವರ್ಗ (ಮಹಿಳೆ) |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 218

**ಕೆ. ಆರ್. ವಲ್ಲೂರ**

ಪೀಠಾಧಿಕಾರಿ–2, ವಸತಿ ಇಲಾಖೆ

**ಕಂದಾಯ ಸಚಿವಾಲಯ**

**ವಿಷಯ:** ರಾಜ್ಯದ ಮಾಜಿ ಭೂ ಮಾಲೀಕರಿಗೆ 2008–09ನೇ ಸಾಲಿನ ಭೂ ಪರಿಹಾರ ನೀಡಲು ಅನುದಾನ ಬಿಡುಗಡೆ ಮಾಡುವ ಬಗ್ಗೆ

**ಓದಲಾಗಿದೆ:**
1 ಪ್ರಾದೇಶಿಕ ಆಯುಕ್ತರು, ಗುಲ್ಬರ್ಗಾ, ಗುಲ್ಬರ್ಗಾ, ವಿಭಾಗ ಇವರ ಪತ್ರ ಸಂಖ್ಯೆ:ಸಂ/ಕಂ/ಪ್ರಾಆಗು/ಭೂಸು/12/2008–09, ದಿನಾಂಕ:16.12.2008
2 ಪ್ರಾದೇಶಿಕ ಆಯುಕ್ತರು ಬೆಳಗಾವಿ, ಬೆಳಗಾವಿ ವಿಭಾಗ ಇವರ ಪತ್ರ ಸಂಖ್ಯೆ:ಪ್ರಾಆಬೆ/ಭೂಮಿ–II/ಭೂಸು/ವಿವ–31/2008–09, ದಿನಾಂಕ:16.9.2008
3 ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ ಇವರ ಪತ್ರ ಸಂಖ್ಯೆ:ಎಲ್‌ಆರ್‌ಎಫ್:ಸಿಆರ್/20/2008–09, ದಿನಾಂಕ:8.12.2008
4 ಜಿಲ್ಲಾಧಿಕಾರಿಗಳು, ಕೊಡಗು ಜಿಲ್ಲೆ, ಕೊಡಗು ಇವರ ಪತ್ರ ಸಂಖ್ಯೆ:ಭೂಸು/3/2008–09, ದಿನಾಂಕ: 19.12.2008.
5 ಜಿಲ್ಲಾಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ ಇವರ ಪತ್ರ ಸಂಖ್ಯೆ:ಎಲ್‌ಆರ್‌ಎಫ್/23/2006–07, ದಿನಾಂಕ:19.12.2008
6 ಜಿಲ್ಲಾಧಿಕಾರಿಗಳು, ಹಾಸನ ಜಿಲ್ಲೆ, ಹಾಸನ ಇವರ ಪತ್ರ ಸಂಖ್ಯೆ:ಭೂಸು/46/2007–08, ದಿನಾಂಕ:22.12.2008

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರಗಳಲ್ಲಿ ಪ್ರಾದೇಶಿಕ ಆಯುಕ್ತರು, ಗುಲ್ಬರ್ಗಾ, ಬೆಳಗಾವಿ, ಮೈಸೂರು ಹಾಗೂ ಜಿಲ್ಲಾಧಿಕಾರಿಗಳು ಕೊಡಗು, ಮಂಡ್ಯ ಮತ್ತು ಹಾಸನ ಇವರು ಮಾಜಿ ಭೂ ಮಾಲೀಕರಿಗೆ ಭೂ ಪರಿಹಾರ ನೀಡುವ ಸಲುವಾಗಿ ಜಿಲ್ಲಾಧಿಕಾರಿಗಳು ಮಂಡ್ಯ ಜಿಲ್ಲೆ ರೂ. 30,65,041.00, ಹಾಸನ ಜಿಲ್ಲೆ ರೂ. 4,00,000.00, ದಕ್ಷಿಣ ಕನ್ನಡ ಜಿಲ್ಲೆಗೆ ರೂ. 73,00,000.00 ಬೀದರ್ ಜಿಲ್ಲೆಗೆ ರೂ. 5,00,000.00 ಕೊಪ್ಪಳ ಜಿಲ್ಲೆಗೆ ರೂ. 9,00,000.00 ಬೆಳಗಾವಿ ಜಿಲ್ಲೆಗೆ ರೂ. 30,00,000.00 ಬಿಜಾಪುರ ಜಿಲ್ಲೆಗೆ ರೂ.1,00,000.00 ಗದಗ ಜಿಲ್ಲೆಗೆ ರೂ.14,00,000.00 ಹಾವೇರಿ ಜಿಲ್ಲೆಗೆ ರೂ. 95,92,000.00 ಮತ್ತು ಉತ್ತರ ಕನ್ನಡ ಜಿಲ್ಲೆಗೆ ರೂ. 8,00,000.00 ಕ್ಕೆ ಬೇಡಿಕೆ ಸಲ್ಲಿಸಿದ್ದು ಅದನ್ನು ಪರಿಶೀಲಿಸಿ ಸರ್ಕಾರವು ಅನುದಾನವನ್ನು ಬಿಡುಗಡೆ ಮಾಡಬೇಕಾದ ಅವಶ್ಯಕತೆಯನ್ನು ಮನಗಂಡು ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿರುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ:ಕಂಇ 91 ಎಲ್‌ಆರ್‌ಎಂ 2008, ಬೆಂಗಳೂರು, ದಿನಾಂಕ:17ನೇ ಫೆಬ್ರವರಿ 2009**

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಅಡಿಯಲ್ಲಿ ಭೂಮಿಯನ್ನು ಕಳೆದುಕೊಂಡ ಮಾಜಿ ಭೂ ಮಾಲೀಕರಿಗೆ ಪರಿಹಾರವನ್ನು ಪಾವತಿಸಲು 2008–09ನೇ ಸಾಲಿಗೆ ಈ ಕೆಳಕಂಡ ಜಿಲ್ಲೆಗಳ ಹೆಸರಿನ ಎದುರಿಗೆ ಸೂಚಿಸಿರುವ ಮೊತ್ತವನ್ನು ಲೆಕ್ಕ ಶೀರ್ಷಿಕೆ 4515–00–103–1–01–100 (ಯೋಜನೇತರ) ಅಡಿಯಲ್ಲಿ ಒಟ್ಟು ರೂ 1,20,00,000/– (ಒಂದು ಕೋಟಿ ಇಪ್ಪತ್ತು ಲಕ್ಷ ರೂಪಾಯಿಗಳು) ಆಯವ್ಯಯದಲ್ಲಿ ಮಂಜೂರು ಮಾಡಲಾಗಿದೆ.

| ಕ್ರ.ಸಂ | ಜಿಲ್ಲೆಯ ಹೆಸರು | ಮಂಜೂರು ಮಾಡಲಾದ ಅನುದಾನ(ರೂ.ಗಳಲ್ಲಿ) |
|---|---|---|
| 1 | ಮಂಡ್ಯ | ರೂ. 18,00,000.00 |
| 2 | ಹಾಸನ | ರೂ. 2,00,000.00 |
| 3 | ದಕ್ಷಿಣ ಕನ್ನಡ | ರೂ. 25,00,000,00 |
| 4 | ಬೀದರ್ | ರೂ. 4,00,000.00 |
| 5 | ಕೊಪ್ಪಳ | ರೂ 5,00,000.00 |
| 6 | ಬೆಳಗಾವಿ | ರೂ. 17,00,000.00 |
| 7 | ಬಿಜಾಪುರ | ರೂ. 1,00,000.00 |
| 8 | ಗದಗ | ರೂ 8,00,000.00 |
| 9 | ಹಾವೇರಿ | ರೂ 35,00,000.00 |
| 10 | ಉತ್ತರ ಕನ್ನಡ | ರೂ. 5,00,000.00 |
| | **ಒಟ್ಟು** | **ರೂ, 1,20,00,000,00** |

ಈ ಮೇಲಿನ ಆದೇಶದಲ್ಲಿ ಮಂಜೂರಾದ ಅನುದಾನಕ್ಕೆ ಉಪಯೋಗಿತ ಪ್ರಮಾಣ ಪತ್ರವನ್ನು (ಯುಟಿಲೈಸೇಷನ್ ಸರ್ಟಿಫಿಕೆಟ್) ಈ ಎಲ್ಲಾ ಸಂಬಂಧಿತ ಜಿಲ್ಲಾಧಿಕಾರಿಗಳು ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 01 ಟಿಎಫ್‌ಪಿ 2003, ದಿನಾಂಕ:12.6.2003 ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರದತ್ತವಾಗಿ ನಿಡಿರುವ ಆದೇಶದನ್ವಯ ಈ ಆದೇಶ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 651 **ಟಿ.ಎನ್. ನಾರಾಯಣಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಸುಧಾರಣೆ)

## ಕೃಷಿ ಸಚಿವಾಲಯ

**ವಿಷಯ :** ಶ್ರೀ ಎ. ಹನುಮಂತಯ್ಯ, ಜಂಟಿ ಕೃಷಿ ನಿರ್ದೇಶಕರು, ರಾಯಚೂರು, ಇವರು ಸ್ವ ಇಚ್ಛಾ ನಿವೃತ್ತಿ ಹೊಂದಲು ಅನುಮತಿ

**ಓದಲಾಗಿದೆ :** 1 ಕೃಷಿ ಆಯುಕ್ತರ ಪತ್ರ ಸಂ:ಕೃಷಿಪ–1/84/2007–08 ದಿನಾಂಕ:17.10.2008

**ಪ್ರಸ್ತಾವನೆ:**

ಮೇಲೆ ಓದಲಾದ –1 ರ ಕೃಷಿ ಆಯುಕ್ತರ ಪ್ರಸ್ತಾವನೆಯಲ್ಲಿ ಶ್ರಿ ಎ. ಹನುಮಂತಯ್ಯ, ಜಂಟಿ ಕೃಷಿ ನಿರ್ದೇಶಕರು, ವೈಯಕ್ತಿಕ ಹಾಗೂ ಕೌಟುಂಬಿಕ ಕಾರಣಗಳನ್ನು ಉಲ್ಲೇಖಿಸಿ ದಿನಾಂಕ:31.10.2008ರ ಅಪರಾಹ್ನದಿಂದ ಜಾರಿಗೆ ಬರುವಂತೆ ಸ್ವ ಇಚ್ಛಾ ನಿವೃತ್ತಿ ಕೋರಿ ಸಲ್ಲಿಸಿರುವ ದಿನಾಂಕ:20.9.2008ರ ಮನವಿಯೊಂದಿಗೆ ಸರ್ಕಾರಿ ನಿರ್ಧರಿತ ಬಾಕಿಗಳಿದ್ದರೂ ಅವರ ಪಿಂಚಣಿ, ಡಿ.ಸಿ.ಆರ್.ಜಿ ಹಣದಿಂದ ಮುರಿದುಕೊಳ್ಳುವಂತೆ ಸದರಿ ಅಧಿಕಾರಿಯು ಸಲ್ಲಿಸಿರುವ ಲಿಖಿತ ಮುಚ್ಚಳಿಕೆಯನ್ನು ಸಹ ಕಳುಹಿಸಿ, ಜೊತೆಗೆ ಈ ಅಧಿಕಾರಿಯ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಇರುವುದಿಲ್ಲವೆಂದು ಹಾಗೂ ಸಕ್ಷಮ ಪ್ರಾಧಿಕಾರವಾದ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 285(1)(ಎ) ಅನ್ವಯ ಸ್ವ ಇಚ್ಛಾ ನಿವೃತ್ತಿ ಹೊಂದಲು ಅನುಮತಿ ನೀಡುವ ಬಗ್ಗೆ ಸೂಕ್ತ ಕ್ರಮ ಕೈಗೊಳ್ಳುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಕೃತೋಇ 286 ಕೃಪಸೇ 2008, ಬೆಂಗಳೂರು, ದಿನಾಂಕ:17ನೇ ಡಿಸೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀ ಎ. ಹನುಮಂತಯ್ಯ, ಜಂಟಿ ಕೃಷಿ ನಿರ್ದೇಶಕರು, ಇವರು ಸ್ವಂತ ಇಚ್ಛೆಯ ಮೇಲೆ ಕೃಷಿ ಇಲಾಖೆಯ ಸೇವೆಯಿಂದ ದಿನಾಂಕ:31.12.2008ರಿಂದ ಜಾರಿಗೆ ಬರುವಂತೆ ಅವರಿಂದ ಸರ್ಕಾರಕ್ಕೆ ಬರಬೇಕಾಗಿರುವ ಬಾಕಿಗಳೇನಾದರೂ ಇದ್ದಲ್ಲಿ ಅದನ್ನು ಅವರ ನಿವೃತ್ತಿ ಉಪದಾನಗಳಿಂದ ಕಟಾವು ಮಾಡುವ ಷರತ್ತಿನೊಂದಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 285(1)(ಎ) ಅನ್ವಯ ಸ್ವ ಇಚ್ಛಾ ನಿವೃತ್ತಿ ಹೊಂದಲು ಅನುಮತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 105 **ಜಿ.ಕೆ. ಗುರಾಣಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಇಲಾಖೆ

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** 2008–09ನೇ ಸಾಲಿಗೆ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರಕ್ಕೆ 4ನೇ ಕಂತಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** 1 ಸರ್ಕಾರಿ ಆದೇಶ ಸಂಖ್ಯೆ:ಮಾತಂಇ 24 ಆಡವಿ 2008, ದಿನಾಂಕ:12.6.2008

2 ಸರ್ಕಾರಿ ಆದೇಶಗಳ ಸಂಖ್ಯೆ:ಮಾತಂಇ 11 ಅಚವಿ 2008 ದಿನಾಂಕ:15.5.2008 26–7–2008 ಮತ್ತು 14.10.2008.

3 ನಿರ್ದೇಶಕರು ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರರವರ ಪತ್ರ ಸಂ:ಕರಾದೂಸಂಅಕೇಂ/105/ಜಿಇಎನ್/2008, ದಿನಾಂಕ:12.12.2008.

**ಪ್ರಸ್ತಾವನೆ:**

2008–09ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ "3451–00–090–2–08 ಕರ್ನಾಟಕ ರಾಜ್ಯ ದೂರ ಸಂವೇದಿಕ ತಂತ್ರಜ್ಞಾನ ಬಳಕೆ ಕೇಂದ್ರ–059 ಇತರೆ ಖರ್ಚು [ಯೋಜನೆ]" ರಡಿಯಲ್ಲಿ ರೂ. 180.00 ಲಕ್ಷಗಳ ಅನುದಾನವನ್ನು ಒದಗಿಸಲಾಗಿದೆ.

ಮೇಲೆ [2]ರಲ್ಲಿ ಓದಲಾದ ದಿನಾಂಕ:15.5.2008, 26.7.2008 ಮತ್ತು ದಿನಾಂಕ:14.10.2008ರ ಸರ್ಕಾರಿ ಆದೇಶಗಳಲ್ಲಿ ಕ್ರಮವಾಗಿ ಮೊದಲನೆಯ ಎರಡನೆಯ ಮತ್ತು ಮೂರನೆಯ ಕಂತಿನ ಅನುದಾನ ರೂ. 45.00+ ರೂ. 45.00 + ರೂ. 45.00 ಒಟ್ಟು ರೂ. 135.00 ಲಕ್ಷ ಹಣವನ್ನು ನಿರ್ದೇಶಕರು, ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರಕ್ಕೆ ಬಿಡುಗಡೆ ಮಾಡಲಾಗಿದೆ.

ಮೇಲೆ(3)ರಲ್ಲಿ ಓದಲಾದ ದಿನಾಂಕ 12.12.2008ರ ಪತ್ರದಲ್ಲಿ ವಿವಿಧ ಯೋಜನೆಗಳನ್ನು ಅನುಷ್ಠಾನಗೊಳಿಸಲು ಹಾಗೂ ಯೋಜನೆಗಳ ವೆಚ್ಚ ಮತ್ತು ಸಿಬ್ಬಂದಿಗಳ ವೇತನವನ್ನು ಭರಿಸಲು ರೂ. 1809.00ಲಕ್ಷಗಳನ್ನು ನೀಡಲಾಗಿದ್ದು ಇದರಲ್ಲಿ ಇದುವರೆವಿಗೂ ರೂ. 135.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದ್ದು, ಕೇಂದ್ರದ ಅಗತ್ಯ ವೆಚ್ಚಗಳನ್ನು ಭರಿಸಬೇಕಾಗಿರುವುದರಿಂದ ಬಾಕಿ ಉಳಿದಿರುವ ಅನುದಾನದಲ್ಲಿ 4ನೇ ಕಂತಿನ ಹಣ ರೂ. 45.00 ಲಕ್ಷಗಳ ಅನುದಾನವನ್ನು ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರಕ್ಕೆ ಬಿಡುಗಡೆ ಮಾಡಲು ನಿರ್ದೇಶಕರು ಕೋರಿರುತ್ತಾರೆ.

2008–09ನೇ ಸಾಲಿನ ಪರಿಷ್ಕೃತ ಆಯವ್ಯಯದಲ್ಲಿ ಸದರಿ ಲೆಕ್ಕ ಶೀರ್ಷಿಕೆ "3451–00–090–2–08 ಕರ್ನಾಟಕ ರಾಜ್ಯ ದೂರ ಸಂವೇದಿಕ ತಂತ್ರಜ್ಞಾನ ಬಳಕೆ ಕೇಂದ್ರ –059 ಇತರೆ ಖರ್ಚು [ಯೋಜನೆ]" ರಡಿಯಲ್ಲಿ ರೂ. 5.00 ಕೋಟಿ ಹೆಚ್ಚುವರಿ ಅನುದಾನ ನೀಡಿದ್ದು, ಒಟ್ಟಾರೆ ರೂ. 680.00 ಲಕ್ಷಗಳನ್ನು ಒದಗಿಸಲಾಗಿದೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸದರಿ ಸಂಸ್ಥೆಗೆ ರೂ. 45.00 ಲಕ್ಷಗಳನ್ನು 4ನೇ ಕಂತಾಗಿ ಬಿಡುಗಡೆ ಮಾಡಲು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಮಾತಂಇ 11 ಅಚವಿ 2008, ಬೆಂಗಳೂರು, ದಿನಾಂಕ:20ನೇ ಡಿಸೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ 2008–09ನೇ ಸಾಲಿಗೆ ವಿವಿಧ ಯೋಜನೆಗಳನ್ನು ಅನುಷ್ಠಾನಗೊಳಿಸಲು ಹಾಗೂ ಯೋಜನೆಗಳ ವೆಚ್ಚ ಮತ್ತು ಸಿಬ್ಬಂದಿಗಳ ವೇತನವನ್ನು ಭರಿಸಲು ಹಾಗೂ ಕೇಂದ್ರದ ಅಗತ್ಯ ವೆಚ್ಚಗಳನ್ನು ಭರಿಸಬೇಕಾಗಿರುವುದರಿಂದ ಬಾಕಿ ಉಳಿದಿರುವ ಅನುದಾನದಲ್ಲಿ 4ನೇ ಕಂತಿನ ಹಣ ರೂ. 45.00 ಲಕ್ಷಗಳ [ನಲವತ್ತೈದು ಲಕ್ಷ ರೂಪಾಯಿಗಳು ಮಾತ್ರ] ಅನುದಾನವನ್ನು ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರಕ್ಕೆ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು 2007–08ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ "3451–00–090–2–08 ಕರ್ನಾಟಕ ರಾಜ್ಯ ದೂರ ಸಂವೇದಿಕ ತಂತ್ರಜ್ಞಾನ ಬಳಕೆ ಕೇಂದ್ರ–059 ಇತರೆ ಖರ್ಚು [ಯೋಜನೆ]" ಇದರ ಅಡಿಯಲ್ಲಿ ಪ್ರಸಕ್ತ ಸಾಲಿನಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ನಿರ್ದೇಶಕರು, ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರ ಇವರು ಅನುದಾನದ ಬಳಕೆಯ ಬಗ್ಗೆ ಉಪಯೋಗಿತಾ ದೃಢೀಕರಣ ಪತ್ರವನ್ನು ಈ ಆರ್ಥಿಕ ವರ್ಷದೊಳಗಾಗಿ ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶಗಳ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ:16.5.08ರನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 109

**ಎಂ.ವಿ. ಕೃಷ್ಣಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

**ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ**

**ವಿಷಯ :** ಕರ್ನಾಟಕ ರಾಜಭಾಷಾ (ವಿಧಾಯೀ) ಆಯೋಗದ ಅಧ್ಯಕ್ಷರ ಮತ್ತು ಸದಸ್ಯರುಗಳ ಸಂಭಾವನೆಯನ್ನು ಹೆಚ್ಚಿಸುವ ಬಗ್ಗೆ.

**ಓದಲಾಗಿದೆ :** 1 ಸರ್ಕಾರದ ಆದೇಶ ಸಂಖ್ಯೆ:ಸಂವ್ಯಶಾಇ 36 ಭಾನಿವಿ 2007, ದಿನಾಂಕ:17.8.2007.

2 ಅಧ್ಯಕ್ಷರು, ಕರ್ನಾಟಕ ರಾಜಭಾಷಾ (ವಿಧಾಯೀ) ಆಯೋಗ ಇವರ ಪತ್ರ ಸಂಖ್ಯೆ:ಕರಾಭಾ(ವಿ) ಆ5/ಸಂಭಾವನೆ/2008, ದಿ:25.9.08.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕರ್ನಾಟಕ ರಾಜಭಾಷಾ (ವಿಧಾಯೀ) ಆಯೋಗದ ಅಧ್ಯಕ್ಷರಿಗೆ ಪ್ರತಿ ದಿನ ರೂ. 300.00ರಂತೆ ಗರಿಷ್ಠ ತಿಂಗಳಿಗೆ ರೂ. 7,000.00 ಹಾಗೂ ಸದಸ್ಯರಿಗೆ ಪ್ರತಿ ದಿನ ರೂ. 250.00 ರಂತೆ ಗರಿಷ್ಠ ತಿಂಗಳಿಗೆ ರೂ. 5,500.00 ಗಳ ಸಂಭಾವನೆಯನ್ನು ನಿಗದಿಪಡಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಕರ್ನಾಟಕ ರಾಜಭಾಷಾ (ವಿಧಾಯೀ) ಆಯೋಗದ ಅಧ್ಯಕ್ಷರ ಮನವಿ ದಿನಾಂಕ:25.9.2008ರಲ್ಲಿ ಆಯೋಗದ ಅಧ್ಯಕ್ಷರಿಗೆ ಪ್ರತಿ ದಿನ 600.00ರಂತೆ ಗರಿಷ್ಟ ತಿಂಗಳಿಗೆ ರೂ. 12,000.00 ಹಾಗೂ ಸದಸ್ಯರಿಗೆ ಪ್ರತಿ ದಿನ ರೂ. 500.00 ರಂತೆ ಗರಿಷ್ಠ ತಿಂಗಳಿಗೆ ರೂ. 10,000.00 ಗಳ ಸಂಭಾವನೆಯನ್ನು ನಿಗದಿಪಡಿಸಲು ಕೋರಲಾಗಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಆಯೋಗದ ಅಧ್ಯಕ್ಷರು ಹಾಗೂ ಸದಸ್ಯರುಗಳ ಸಂಭಾವನೆಯನ್ನು ಪರಿಷ್ಕರಿಸಲು ನಿರ್ಣಯಿಸಿಲಾಗಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಸಂವ್ಯಶಾಇ 51 ಭಾನಿವಿ 2008, ಬೆಂಗಳೂರು, ದಿನಾಂಕ:27ನೇ ಡಿಸೆಂಬರ್ 2008**

ಕರ್ನಾಟಕ ರಾಜಭಾಷಾ (ವಿಧಾಯೀ) ಆಯೋಗದ ಅಧ್ಯಕ್ಷರಿಗೆ ದಿನ ಒಂದಕ್ಕೆ ರೂ. 500–00ರಂತೆ ಗರಿಷ್ಠ ರೂ. 10,000–00ಗಳಿಗೆ (ಹತ್ತು ಸಾವಿರ ರೂಪಾಯಿಗಳು ಮತ್ರ) ಹಾಗೂ ಸದಸ್ಯರಿಗೆ ದಿನ ಒಂದಕ್ಕೆ ರೂ. 400–00ರಂತೆ ಗರಿಷ್ಟ ತಿಂಗಳಿಗೆ ರೂ. 8,000–00 (ಎಂಟು ಸಾವಿರ ರೂಪಾಯಿಗಳು ಮಾತ್ರ) ಸಂಭಾವನೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಪರಿಷ್ಕರಿಸಿ ನಿಗದಿಪಡಿಸಿದೆ.

ಈ ಆಯೋಗಕ್ಕೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 2052–ಸಚಿವಾಲಯ–ಸಾಮಾನ್ಯ ಸೇವೆ–092–08–ಭಾಷಾಂತರ ನಿರ್ದೇಶಕರು–ರಾಜಭಾಷಾ (ವಿಧಾಯೀ) ಆಯೋಗ–(ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 29ವೆ–10/2008, ದಿನಾಂಕ:15.12.2008ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ. ಶ್ರೀಧರ್**

ಪಿ.ಆರ್. 232

ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ

**ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ**

**ವಿಷಯ :** ಸಿವಿಲ್ ನ್ಯಾಯಾಲಯಗಳು, ಬೆಂಗಳೂರು, ಇಲ್ಲಿಗೆ ಎರಡು ಉಪನಿಬಂಧಕರುಗಳ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :** 1 ಸರ್ಕಾರದ ಅಧಿಸೂಚನೆ ಸಂಖ್ಯೆ:ಲಾ 294 ಎಲ್ ಏಸಿ 2005, ದಿನಾಂಕ:29.12.2006.

2 ಪತ್ರ ಸಂಖ್ಯೆ:ಎಲ್‌ಏಸಿ–II 199/2007 ದಿನಾಂಕ:26.12.2007.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ (1)ರ ಸರ್ಕಾರದ ಅಧಿಸೂಚನೆಯಲ್ಲಿ ಸರ್ಕಾರವು ಕರ್ನಾಟಕ (Case Flow Management in Subordinate Courts) ನಿಯಮಾವಳಿಗಳು, 2005ನ್ನು ಪ್ರಕಟಿಸಿರುತ್ತದೆ. ಈ ಸಂಬಂಧದಲ್ಲಿ ಮೇಲೆ ಓದಲಾದ ಕ್ರ.ಸಂ. (2)ರ ಪತ್ರದಲ್ಲಿ ಕರ್ನಾಟಕ ಉಚ್ಚನ್ಯಾಯಾಲಯದ ಮಹಾನಿಬಂಧಕರು ಸರ್ಕಾರಕ್ಕೆ ಪ್ರಸ್ತಾವನೆ ಕಳುಹಿಸಿದ್ದು ಸದರಿ ನಿಯಮಾವಳಿ ಅಡಿಯಲ್ಲಿ ಉಪನಿಬಂಧಕರ ದರ್ಜೆಯ ಅಧಿಕಾರಿಗಳು ಪ್ರಥಮ ವಿಚಾರಣೆ ಪ್ರಕರಣಗಳನ್ನು ನಿರ್ವಹಿಸಬೇಕಾಗುತ್ತದೆ. ಈಗ ನಗರ, ಸಿವಿಲ್ ನ್ಯಾಯಾಲಯದಲ್ಲಿ ಒಬ್ಬರು ಹಾಗೂ ಮೇಯೋಹಾಲ್ ನ್ಯಾಯಾಲಯದಲ್ಲಿ ಒಬ್ಬರು, ಒಟ್ಟು ಇಬ್ಬರು ಉಪನಿಬಂಧಕರ ಹುದ್ದೆಗಳು ಮಾತ್ರ ಇದ್ದು ನ್ಯಾಯಾಲಯಗಳಲ್ಲಿ ಅಧಿಕ ಪ್ರಮಾಣದಲ್ಲಿ ಬರುತ್ತಿರುವ ಪ್ರಥಮ ವಿಚಾರಣೆ ಪ್ರಕರಣಗಳನ್ನು ನಿರ್ವಹಿಸುವುದು ಕಷ್ಟಕರವಾಗಿರುವ ಹಿನ್ನೆಲೆಯಲ್ಲಿ ನಗರ ಸಿವಿಲ್ ನ್ಯಾಯಾಲಯಗಳಿಗೆ ಎರಡು ಹೆಚ್ಚುವರಿ ಉಪನಿಬಂಧಕರುಗಳ (Deputy Registrars) ಹುದ್ದೆಗಳನ್ನು ಮಂಜೂರು ಮಾಡಬೇಕೆಂದು ಪ್ರಸ್ತಾಪಿಸಲಾಗಿರುತ್ತದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಲಾ 48 ಎಲ್ ಏಸಿ 2008, ಬೆಂಗಳೂರು, ದಿನಾಂಕ:27ನೇ ಡಿಸೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ನಗರ ಸಿವಿಲ್ ನ್ಯಾಯಾಲಯ, ಬೆಂಗಳೂರು ಇಲ್ಲಿ ತಕ್ಷಣದಿಂದಲೇ ಜಾರಿಗೆ ಬರುವಂತೆ ರೂ. 9000–14550 ರ ವೇತನ ಶ್ರೇಣಿಯಲ್ಲಿ ಎರಡು ಉಪನಿಬಂಧಕರ (Deputy Registratr) ಹುದ್ದೆಗಳನ್ನು ಹೆಚ್ಚುವರಿಯಾಗಿ ಸೃಜಿಸಲಾಗಿದೆ.

ಈ ಆದೇಶವನ್ನು ಟಿಪ್ಪಣಿ ಸಂಖ್ಯೆ:ಆಇ/ವೆ–10/2008 ದಿನಾಂಕ:16.12.2008ರಲ್ಲಿ ಆರ್ಥಿಕ ಇಲಾಖೆಯ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 235

**ಇ. ಶಿವಾನಂದ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

## FOREST, ECOLOGY & ENVIRONMENT SECRETARIAT

## ADDENDUM

**No. FEE 85 FAP 2008, Bangalore, Dated:4th December 2008**

The words "for the year 2010-2011" and "for the year 2011-2012" is inserted at para 1 in the last line of the oder portion of the Government order No. FEE 85 FAP 2008, dated:2.7.2008 in between "Computers and" and also "16 Vehicles-out of the 'respectively.

By order and in the Name of the Governor of Karnataka

**H.M. MALLIKARJUNA SWAMY**

PR. 1676

Under Secretary to Government,

Forest, Environment & Ecology Department

**Sub :** Transfer of ML .No. 329 A(New ML. No. 2566) for mining iron ore over an extent of 7.85 ha. in Lakkihalli and kenkere villages of Hosadurga Taluk, Chitradurga District from Shri M. Chennakeshava Reddy to Sri Lakshmi Narasimha Mining Co.Pvt. Ltd., Bangalore.

**Read :**
1) Government Order No. FEE 204 FFM 2006, dated:18.9.2007.
2) Letter No. A5 (1) MNG. CR 11/02-03, dated:27.11.2008 of the Principal Chief Conservator of Forests, Bangalore
3) State Government letter No. FEE 155 FFM 2008, dt:8.12.2008.
4) Latter No. 4-KRC 277/2007-BAN/3530, dated:1.1.2009 of Government of India, Ministry of Environment and Forests, Regional Office, South Zone, Bangalore.

**PREAMBLE:**

Government in Order read at (1) above has accorded approval under Forest (Conservation )Act, 1980 for diversion of 7.85 ha of forest land in Lakkihalli and Kenkere villages of Hosadurga Taluk Chitradurga District (M.L.No. 329(A) in favour of Sri Channakeshava Reddy subject to certain conditions.

The Principal Chief Conservator of Forests, Bangalore vide his letter dated:27.11.2008 read at (2) above had submitted proposal to obtain the approval of Government of India for transfer of ML.No 329(A) New No. 2566 over an area of 7.85 ha of forest land in Lakkihalli and Kenkere villages of Hosadurga Taluk, Chitradurga District from Sri Channakeshava Reddy to Sri Lakshmi Narasimha Mining Co.Pvt. Ltd., Bangalore as per para 2.8 of chapter 2 of The Forest (Conservation )Act 1980 and amended Rules 2003 and 2004

The original user agency Sri Channakeshava Reddy has proposed to transfer 7.85 ha of forest land to the new user agency Sri Lakshmi Narasimha Mining Co. Pvt.Ltd., Bangalore. The original user agency has submitted N.O.C. for such transfer and new user agency have submitted an under taking that he will abide by all the conditions which may be stipulated by Government of India and Government of Karnataka from time to time.

Accordingly the proposal was recommended to Government of India vide State Government letter dated 8-12-2008 read at (3) above.

Government of India, Ministry of Environment and Forests, Regional Office, Bangalore vide their letter dated:1.1.2009 read at (4) above has conveyed its approval for transfer of mining lease of ML.No. 329A(New No 2566) over an area of 7.85 ha of forest land in Lakkihalli and Kenkere villages of Hosadurga Taluk, Chitradurga District from Sri Channakeshava Reddy to Sri Lakshmi Narasimha Mining Co. Pvt., Ltd., Bangalore.

The proposal has been examined in detail and hence the order.

**Government Order No. FEE 155 FFM 2008, Bangalore, Dated:7th January 2009**

In the circumstances explained above, Government are pleased to accord sanction as per para 2.8 of Chapter 2 of The Forest (Conservation) Act 1980 with amended rules 2003 for transfer of lease in respect of MLNo 329A (New No. 2566) over an area of 7.85 ha of forest land in Lakkihalli and Kenkere villages of Hosadurga Taluk Chitradurga District from Sri Channakeshava Reddy to Sri Lakshmi Narasimha Mining Co Pvt. Ltd., Bangalore subject to fulfillment of legal formalities /requirements viz legally valid application/consent for transfer of lease, authorization of signatory by the Company submission of papers related to formation of the Company, to be verified by Deputy Conservator of Forests, Chitradurga Sub division.

The transfer of lease is subject to the condition that new user agency i.e. Sri Lakshmi Narasimha Mining Co.Pvt. Ltd., Bangalore shall abide by all the conditions imposed by the Central Government /State Government/Principal Chief Conservator of Forests for diversion of mining lease of M.L.No. 329A (New No. 2566) over an area of 7.85 ha of forest land in Lakkihalli and Kenkere villages of Hosadurga Taluk, Chitradurga District from Sri Channakeshava Reddy to Sri Lakshmi Narasimha Mining Co. Pvt. Ltd., Bangalore.

By order and in the Name of the Governor of Karnataka

**P.R. KALAVATHI**

PR. 335

Under Secretary to Government,

Forest, Ecology & Environment Department

**Sub :** Diversion of 1.355 ha of forest land for laying underground Optical Fibre Cable from Kadra-Kateli in Karwar Forest Division to M/s Reliance Communications Limited, Bangalore..

**Read :** 1) Letter NoA5(2) GFL CR 2/08-09, dated 19.4.2008 of Principal Chief Conservator of Forests, Bangalore.

2) Government of India letter No. F.No. 11-9/98-FC, dated:21.11.2005.

**PREAMBLE:**

The Principal Chief Conservator of Forests, Bangalore vide his letter dated 19.4.2008 read at (1) above has submitted the proposal for diversion of 1.355 ha. of forest land under the Forest (Conservation) Act, 1980 and Government of India guidelines dated 21.11.2005 cited under reference (2) above for laying underground Optical Fiber Cable from Kadra-Kateli, in Karwar Forest Division to M/s Reliance Communications Limited, Bangalore subject to certain conditions.

The proposal has been examined in detail and hence the order.

**Government Order No. FEE 87FLL 2008, Bangalore, Dated:29th November 2008**

In the circumstances explained in the preamble above Government are pleased to accord approval under Forest (Conservation )Act, 1980 and guidelines dated:21.11.2005 of the Government of India for diversion of 1.355 ha of forest land for laying Optical Fibre Cable from Kadra to Kateli of Karwar

Forest Division to M/s Reliance Communications Limited, Bangalore subject to the following conditions.

1. The legal status of the forest land will continue to be as forest land.
2. The land shall be utilized only for the purpose for which it is released.
3. The user agency has to pay the lease rent as fixed by the Government at the time of sanction and any subsequent orders in this regard.
4. The lease is granted for 20 (twenty) years.
5. The Karnataka Forest Act 1963 and Rules 1969 will be applicable for any violation.
6. If the land is not utilized for the purpose within 2 years for which it is granted, the forest land shall be resumed back to Forest Department by the Conservator of Forests by following the provisions under Section 82 of the Karnataka Forest Act 1963.
7. The user agency shall pay the NPV of the diverted forest land and the additional amount of the NPV if any due as per the orders of the Hon'ble Supreme Court dated 28.3.2008 and 9.5.2008 in IA Nos 826 in 566 with related IA's in Writ Petition (Civil) No. 202/1995 shall be realised from the user agency and transferred to Ad-hoc CAMPA in account number CA-1578 of Corporation Bank, Block-II, CGO Complex, Phase-I. Lodhi Road, New Delhi-110 003 under intimation to Government of India
8. The user agency has to pay the cost of raising compensatory afforestation charges at the rate prevailing at the time of sanction (at present it is Rs. 84,000.00 per ha)
9. Any other condition imposed by the Government of India/State Government/Principal Chief Conservator of Forests, Bangalore will have to be abided by the lessee.

By order and in the Name of the Governor of Karnataka

**P.R. KALAVATHI**

PR. 336

Under Secretary to Government,

Forest, Ecology & Environment Department

**FINANCE SECRETARIAT**

**CORRIGENDUM**

**No. FD 42 EPS 2007, Bangalore, Dated:17th December 2008**

**Sub :** Reorganisation/Restructure of the Excise Department consequent to the abolition of arrack in the State.

The following corrections are ordered to the Annexure-I (G) and Annexure-II of the Government Order No. FD 42 EPS 2007 (1) dt 24.3.2008.

**a) Annexure-I (G)**

In Sl.No. 5 at column 6, the figure '1' shall be read as '0'

**b) Annexure-II**

(i) under the head-II Inspector of Excise at Sl.No. 24, the word 'Bangalore' shall be read as ‘Mangalore.’

(ii) Under the head-V Excise Guard at Sl.No. 46, the words 'Raichur Sub-Division, Udupi District, shall be read as **'Raichur Sub-Division, Raichur District'**

(iii) Under the head -V Excise Guard at Sl. No. 53 the words 'Udupi District' shall be read as **'Uttara Kannada District' .**

By order and in the Name of the Governor of Karnataka

PR. 201

**B.N. JAGADEESH**

Under Secretary to Government, Finance Department (Excise)

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** 2008–09ನೇ ಸಾಲಿಗೆ ಡಿಆರ್ ಡಿಎ ಆಡಳಿತ ಯೋಜನೆಯ ರಾಜ್ಯದ ಪಾಲಿನ ಎರಡನೇ ಕಂತಿನ ಅನುದಾನವನ್ನು 11 ಜಿಲ್ಲಾ ಪಂಚಾಯಿತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ

**ಓದಲಾಗಿದೆ :**
1 ಕೇಂದ್ರ ಸರ್ಕಾರದ ಪತ್ರ ಸಂಖ್ಯೆ:ಆರ್–20015:28:2007– ಡಿಆರ್‌ಡಿಎ (ಎಸ್ಆರ್ ನಂ.10) ದಿನಾಂಕ:3.4.2008 ಮತ್ತು (ಎಸ್ಆರ್ ನಂ. 40) ದಿನಾಂಕ:28.5.2008.
2 ಸರ್ಕಾರದ ಆದೇಶ ಸಂ.ಗ್ರಾಅಪ 7 ಎಸ್‌ಜೆವೈ (ಡಿಆರ್‌ಡಿಎ) 2008 ಬೆಂಗಳೂರು ದಿನಾಂಕ:23.5.2008 ಮತ್ತು 26.6.2008.
3 ಕೇಂದ್ರ ಸರ್ಕಾರದ ಪತ್ರ ಸಂಖ್ಯೆ:ಆರ್–17014/10/2008–09 ಡಿಆರ್‌ಡಿಎ (ಎಸ್1) ದಿನಾಂಕ:3.11.2008.
4 ಕೇಂದ್ರ ಸರ್ಕಾರದ ಪತ್ರ ಸಂಖ್ಯೆ:ಆರ್–17014/10/2008 ಡಿಆರ್‌ಡಿಎ (ಎಸ್ನಂ. 90) ದಿನಾಂಕ:14.11.2008

**ಪ್ರಸ್ತಾವನೆ:**

2008–09ನೇ ಸಾಲಿಗೆ ಡಿಆರ್‌ಡಿಎ ಆಡಳಿತ ಯೋಜನೆಯಡಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಮೇಲೆ ಓದಲಾದ ಪತ್ರ (1) ಹಾಗೂ ಆದೇಶ (2)ರಲ್ಲಿ ಒಂದನೇ ಕಂತಿನ ಹಾಗೂ ಒಂದನೇ ಕಂತಿನ ಅನುದಾನವಾಗಿ ರೂ, 4,38,77,000 ಹಾಗೂ ರೂ. 1,79,57,000 ಗಳನ್ನು ಅನುಕ್ರಮವಾಗಿ ರಾಜ್ಯದ 29 ಜಿಲ್ಲಾ ಪಂಚಾಯಿತಿಗಳಿಗೆ ಬಿಡುಗಡೆ ಮಾಡಿವೆ. ಈಗ ಕೇಂದ್ರ ಸರ್ಕಾರವು ಎರಡನೇ ಕಂತಿನ ಅನುದಾನವಾಗಿ, ಓದಲಾಗಿದೆ (3) ರಲ್ಲಿ ರಾಜ್ಯದ ಬಾಗಲಕೋಟೆ ಬೀದರ್, ಬಿಜಾಪುರ, ಚಿತ್ರದುರ್ಗ, ಧಾರವಾಡ, ಗದಗ್, ಮಂಡ್ಯ, ಉತ್ತರ ಕನ್ನಡ ಜಿಲ್ಲಾ ಪಂಚಾಯಿತಿಗಳಿಗೆ ರೂ 2,00,47,000 ಹಾಗೂ ಓದಲಾಗಿದೆ (4)ರಲ್ಲಿ ದಾವಣಗೆರೆ ಹಾಸನ ಮತ್ತು ಮೈಸೂರು ಜಿಲ್ಲಾ ಪಂಚಾಯಿತಿಗಳಿಗೆ ರೂ. 69,16,000 ಗಳನ್ನು ಹೀಗೆ ಒಟ್ಟು ರೂ, 2,69,63,000 ರಾಜ್ಯದ 11 ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ 75:25 ಅನುಪಾತದಲ್ಲಿ ರಾಜ್ಯದ ಪಾಲಿನ ಅನುದಾನ ರೂ. 89,88,000ನ್ನು ಈ 11 ಜಿಲ್ಲಾ ಪಂಚಾಯಿತಿಗಳಿಗೆ ಬಿಡುಗಡೆ ಮಾಡಬೇಕಾಗಿದೆ. ಆದರೆ, ಗದಗ್ ಜಿಲ್ಲೆಗೆ ಯೋಜನೆಯಡಿ ರಾಜ್ಯದ ಆಯವ್ಯಯದಲ್ಲಿ ಅನುದಾನದ ಕೊರತೆಯ ಕಾರಣ ರೂ 8,30,000 ಲಕ್ಷಗಳ ಬದಲಿಗೆ ರೂ. 7,69,000ಗಳನ್ನು ಮಾತ್ರ ಬಿಡುಗಡೆ ಮಾಡಬೇಕಾಗಿದೆ. ಅದರಂತೆ ರಾಜ್ಯದ 11 ಜಿಲ್ಲಾ ಪಂಚಾಯಿತಿಗೆ ಒಟ್ಟು ರೂ. 89,88,000ರ ಬದಲಿಗೆ ರೂ, 89,27,000ನ್ನು ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ, ಈ ಕೆಳಗಿನ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 7 ಎಸ್‌ಜೆವೈ (ಡಿಆರ್‌ಡಿಎ) 2008, ಬೆಂಗಳೂರು, ದಿನಾಂಕ:18ನೇ ಡಿಸೆಂಬರ್ 2008**

2008–09ನೇ ಸಾಲಿನಲ್ಲಿ ಕೇಂದ್ರ ಸರ್ಕಾರವು ಡಿಆರ್‌ಡಿಎ ಆಡಳಿತ ಯೋಜನೆಯಡಿ ಬಿಡುಗಡೆ ಮಾಡಿರುವ ಎರಡನೇ ಕಂತಿನ ಒಟ್ಟು ಅನುದಾನಕ್ಕೆ ಅನುಗುಣವಾಗಿ ರಾಜ್ಯ ಸರ್ಕಾರವು ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ತೋರಿಸಿರುವ 11 ಜಿಲ್ಲಾ ಪಂಚಾಯಿತಿಗಳಿಗೆ ತನ್ನ ಪಾಲಿನ ಎರಡನೇ ಕಂತಿನ ಅನುದಾನ ರೂ. 89,27,000ನ್ನು (ಎಂಬತ್ತೊಂಭತ್ತು ಲಕ್ಷದ ಇಪ್ಪತ್ತೇಳು ಸಾವಿರ ರೂಪಾಯಿಗಳು ಮಾತ್ರ) ಕೆಳಕಾಣಿಸಿದ ಷರತ್ತುಗಳಿಗೆ ಒಳಪಟ್ಟು ಅನುದಾನವನ್ನು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಡಿಆರ್‌ಡಿಎ ಆಡಳಿತ ಯೋಜನೆಯ ಕೈಪಿಡಿಯ ಮಾರ್ಗಸೂಚಿಯಂತೆ ಈ ಆದೇಶದಲ್ಲಿ ಬಿಡುಗಡೆ ಮಾಡಿದ ಪಂಚಾಯಿತಿಗಳ ಅನುದಾನವನ್ನು ಜಿಲ್ಲಾ ಪಂಚಾಯಿತಿಗಳ ಸಿಬ್ಬಂದಿಗಳ ವೇತನ ಹಾಗೂ ಸಾದಿಲ್ವಾರು ವೆಚ್ಚಗಳಿಗೆ ಮಾತ್ರ ಉಪಯೋಗಿಸುವುದು. ಇನ್ನಾವುದೇ ಉದ್ದೇಶಗಳಿಗೆ ಉಪಯೋಗಿಸತಕ್ಕದ್ದಲ್ಲ.

ಅನುದಾನದ ಮಾದರಿಯು ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ನಡುವೆ 75:25 ರ ಅನುಪಾತದಲ್ಲಿರುತ್ತದೆ.

ಯೋಜನೆಯ ವೆಚ್ಚವನ್ನು ಲೆಕ್ಕಶೀರ್ಷಿಕೆ "2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00–196–ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ–6–ಜಿಲ್ಲಾ ಪಂಚಾಯತ್–06–ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ–(ಕೇಂದ್ರ ಪುರಸ್ಕೃತ ಯೋಜನೆ)_ 2008–2009 (2515–00–196–6–06)" ರಡಿ ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ ಎಫ್‌ಡಿ 1 ಜೆಡ್‌ಪಿಎ 2007(ಪಿ2) ದಿನಾಂಕ:26.4.2007 ರನ್ವಯ ಜಿಲ್ಲಾ ಪಂಚಾಯತ್ ನಿಧಿ 1ಕ್ಕೆ ಜಮೆ ಮಾಡಿಕೊಂಡು ಭರಿಸತಕ್ಕದ್ದು.

ಈ ಆದೇಶದಲ್ಲಿ ಬಿಡುಗಡೆ ಮಾಡಿರುವ ಅನುದಾನದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

ಬಿಡುಗಡೆ ಮಾಡಿರುವ ಅನುದಾನವನ್ನು ಟ್ರೆಜರಿಯಿಂದ ಸೆಳೆಯುವ ಅಧಿಕಾರವನ್ನು ಆಯಾಯ ಜಿಲ್ಲಾ ಪಂಚಾಯತಿಯ ಮುಖ್ಯ ಲೆಕ್ಕಾಧಿಕಾರಿಗೆ ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ.

ಮುಖ್ಯ ಲೆಕ್ಕಾಧಿಕಾರಿಗಳು, ಜಿಲ್ಲಾ ಪಂಚಾಯಿತಿ ಇವರು ಆಯಾ ತಿಂಗಳ ಪ್ರಗತಿ ವರದಿ ಹಾಗೂ ಹುದ್ದೆವಾರು ವಿವರಗಳನ್ನು ಮುಂದಿನ ತಿಂಗಳ 5ನೇ ತಾರೀಖಿನೊಳಗೆ ನಿರ್ದೇಶಕರು [ಸ್ವ ಉಕಾ] ಹಾಗೂ ಪದ ನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, ಕರ್ನಾಟಕ ಸರ್ಕಾರ ಬೆಂಗಳೂರು ಇವರಿಗೆ ತಪ್ಪದೇ ಕಳುಹಿಸುವುದು.

ಜಿಲ್ಲಾ ಪಂಚಾಯಿತಿಗಳ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಲೆಕ್ಕ ಪರಿಶೋಧನಾ ವರದಿಗಳನ್ನು, ನಿರ್ದೇಶಕರು [ಸ್ವ ಉಕಾ] ಹಾಗೂ ಪದ ನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, ಕರ್ನಾಟಕ ಸರ್ಕಾರ, ಬೆಂಗಳೂರು ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಕರ್ನಾಟಕ ಸರ್ಕಾರ ಇವರ ಸಹಮತಿ ಸಂಖ್ಯೆ:ಗ್ರಾಅಪ 524ಪಿಬಿಎಸ್ 2008, ದಿನಾಂಕ:18.12.2008ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ: ಶಮ್ಲಾ ಇಕ್ಬಾಲ್**

ನಿರ್ದೇಶಕರು (ಸ್ವ.ಉ.ಕಾ) ಹಾಗೂ ಪ.ನಿ.

ಸರ್ಕಾರದ ಉಪ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 7 ಎಸ್‌ಜಿವೈ (ಡಿಆರ್‌ಡಿಎ) 2008, ಬೆಂಗಳೂರು, ದಿನಾಂಕ:18.12.2008ಕ್ಕೆ ಅನುಬಂಧ**

**(ರೂ.ಗಳಲ್ಲಿ)**

| ಕ್ರ. ಸಂ | ಜಿಲ್ಲಾ ಪಂಚಾಯಿತಿ | ಜಿ.ಪಂ ಕೋಡ್ | ಡಿ.ಡಿ.ಓ ಕೋಡ್ | ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಎರಡನೇ ಕಂತಿನ ಅನುದಾನ | ರಾಜ್ಯಸರ್ಕಾರವು ಬಿಡುಗಡೆ ಮಾಡಬೇಕಾದ ಎರಡನೇ ಕಂತಿನ ಅನುದಾನ | ರಾಜ್ಯ ಸರ್ಕಾರದ ಆಯವ್ಯಯದಲ್ಲಿ ಜಿಲ್ಲೆಗೆ ಲಭ್ಯವಿರುವ ಅನುದಾನದ ಆಧಾರದ ಮೇಲೆ ಬಿಡುಗಡೆ ಮಾಡುತ್ತಿರುವ ಎರಡನೇ ಕಂತಿನ ಅನುದಾನ |
|---|---|---|---|---|---|---|
| 1 | ಬಾಗಲಕೋಟೆ | 461 | 2900ZZ0001 | 29,01,000 | 9,67,000 | 9,67,000 |
| 2 | ಬೀದರ್ | 419 | 3800 ZZ 701 | 18,69,000 | 6,23,000 | 6,23,000 |
| 3 | ಬಿಜಾಪುರ | 414 | 2800 ZZ9152 | 24,23,000 | 8,08,000 | 8,08,000 |
| 4 | ಚಿತ್ರದುರ್ಗ | 403 | 1600 ZZ 001 | 31,72,000 | 10,57,000 | 10,57,000 |
| 5 | ದಾವಣಗೆರೆ | 451 | 1700 ZZ 002 | 21,32,000 | 7,11,000 | 7,11,000 |
| 6 | ಧಾರವಾಡ | 415 | 2500 ZZ 798 | 28,84,000 | 9,61,000 | 9,61,000 |
| 7 | ಗದಗ್ ** | 462 | 2600 ZZ 001 | 24,91,000 | 8,30,000 | 7,69,000 |
| 8 | ಹಾಸನ | 410 | 1300 ZZ0003 | 20,64,000 | 6,88,000 | 6,88,000 |
| 9 | ಮಂಡ್ಯ | 412 | 1100 ZZ 001 | 26,13,000 | 8,71,000 | 8,71,000 |
| 10 | ಮೈಸೂರು | 407 | 0900 ZZ 001 | 27,20,000 | 9,07,000 | 9,07,000 |
| 11 | ಉತ್ತರ ಕನ್ನಡ | 416 | 3000 ZZ 080 | 16,94,000 | 5,65,000 | 5,65,000 |
| | | ಒಟ್ಟು | | 2,69,63,000 | 89,88,000 | 89,27,000 |

** ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಅನುದಾನಕ್ಕೆ ಅನುಗುಣವಾಗಿ ರಾಜ್ಯ ಸರ್ಕಾರ ಗದಗ್ ಜಿಲ್ಲೆಗೆ ರೂ,. 8,30,000 ಗಳನ್ನು ಬಿಡುಗಡೆ ಮಾಡಬೇಕಾಗಿದ್ದು, ರಾಜ್ಯದ ಆಯವ್ಯಯದಲ್ಲಿ ಜಿಲ್ಲೆಗೆ ಹಂಚಿಕೆ ಮಾಡಿರುವ ಅನುದಾನದ ಲಭ್ಯತೆಯ ಆಧಾರದ ಮೇಲೆ ರೂ. 7,69,000 ಗಳನ್ನು ಬಿಡುಗಡೆ ಮಾಡಲಾಗುತ್ತಿದೆ.

**ಡಾ: ಶಮ್ಲಾ ಇಕ್ಬಾಲ್**

ಪಿ.ಆರ್. 107

ನಿರ್ದೇಶಕರು (ಸ್ವ.ಉ.ಕಾ) ಹಾಗೂ ಪ.ನಿ.

ಸರ್ಕಾರದ ಉಪ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಮೈಸೂರು ತಾಲ್ಲೂಕು ಕಸಬಾ ಹೋಬಳಿ, ಬಂಡೀಪಾಳ್ಯ ಗ್ರಾಮದ ಮೋಜಣಿ ಸಂಖ್ಯೆ:55/2ಬಿ1, 55/2ಬಿ2, 56/2ಎ 56/2ಬಿ, 56/3ಎ1, 57/1 57/2, 57/3 63/3ಎ, 64, 66/2, ಸರ್ಕಾರಿ ಉತ್ತನಹಳ್ಳಿ ಗ್ರಾಮದ ಮೋಜಣಿ ಸಂಖ್ಯೆ 199/1 200/2, 201/1 201/2, 201/3 ಮತ್ತು ಹಡಜನ ಗ್ರಾಮದ ಮೋಜಣಿ ಸಂಖ್ಯೆ 185/1ರ ಒಟ್ಟು ವಿಸ್ತೀರ್ಣ 21 ಎಕರೆ 30.5 ಗುಂಟೆ ಜಮೀನನ್ನು ವ್ಯವಸಾಯ ವಲಯದಿಂದ ವಸತಿ ವಲಯಕ್ಕೆ ಭೂ ಉಪಯೋಗ ಬದಲಾವಣೆ ಮಾಡಲು ಕೋರಿರುವ ಬಗ್ಗೆ.

**ಓದಲಾಗಿದೆ :** 1 ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು ಇವರ ಪತ್ರ ಸಂಖ್ಯೆ: ಮೈನಪ್ರಾ: ನಯೋ:ಸಭೆ: 149 :08–09 ದಿನಾಂಕ:30–10–2008

2 ದಿ:21.11.08ರಂದು ಕಡತ ಸಂಖ್ಯೆ:ನಯೋ :ಉನಿ:ಭೂಉಬ :230:ಬಂಡೀಪಾಳ್ಯ :2008–09 ರಲ್ಲಿ ನಗರ ಯೋಜನಾ ನಿರ್ದೇಶಕರು ನೀಡಿರುವ ಅಭಿಪ್ರಾಯ

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು, ಇವರು ಮೈಸೂರು ತಾಲ್ಲೂಕು ಕಸಬಾ ಹೋಬಳಿ, ಬಂಡೀಪಾಳ್ಯ ಗ್ರಾಮದ ಮೋಜಣಿ ಸಂಖ್ಯೆ:55/2ಬಿ1, 55/2ಬಿ2, 56/2ಎ, 56/2ಬಿ, 56/3ಎ1, 57/1 57/2 57/3 63/3ಎ, 64, 66/2 ಸರ್ಕಾರಿ ಉತ್ತನಹಳ್ಳಿ ಗ್ರಾಮದ ಮೋಜಣಿ ಸಂಖ್ಯೆ 199/1, 200/2, 201/1, 201/2 201/3 ಮತ್ತು ಹಡಜನ ಗ್ರಾಮದ ಮೋಜಣಿ ಸಂಖ್ಯೆ 185/1ರ ಒಟ್ಟು ವಿಸ್ತೀರ್ಣ 21 ಎಕರೆ 30.5 ಗುಂಟೆ ಜಮೀನನ್ನು ವ್ಯವಸಾಯ ವಲಯದಿಂದ ವಸತಿ ಉದ್ದೇಶಕ್ಕೆ ಭೂ ಉಪಯೋಗ ಬದಲಾವಣೆ ಕುರಿತು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 14(ಎ)ರನ್ವಯ ಸ್ಥಳೀಯ ಪತ್ರಿಕೆಗಳಲ್ಲಿ ಪ್ರಕಟಣೆಯನ್ನು ಹೊರಡಿಸಿದ್ದು, ಈ ಬಗ್ಗೆ ಯಾವುದೇ ಆಕ್ಷೇಪಣೆ ಬಂದಿರುವುದಿಲ್ಲವೆಂದು ತಿಳಿಸುತ್ತಾ, ಪ್ರಸ್ತಾವನೆಯನ್ನು ಶಿಫಾರಸ್ಸು ಮಾಡಿ ನಿರ್ದೇಶಕರು, ನಗರ ಯೋಜನಾ ಇಲಾಖೆ ಇವರ ಮುಖಾಂತರ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಕಡತದಲ್ಲಿ ನಗರ ಯೋಜನಾ ನಿರ್ದೇಶಕರು ಪ್ರಸ್ತಾವನೆಯನ್ನು ಪರಿಗಣಿಸಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ನಅಇ 789 ಮೈಅಪ್ರಾ 2008, ಬೆಂಗಳೂರು, ದಿನಾಂಕ:12ನೇ ಡಿಸೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 14(1)(ಎ)ರ ಪ್ರಕಾರ ಮೈಸೂರು ತಾಲ್ಲೂಕು ಕಸಬಾ ಹೋಬಳಿ, ಬಂಡೀಪಾಳ್ಯ ಗ್ರಾಮದ ಮೋಜಣಿ ಸಂಖ್ಯೆ:55/2ಬಿ1 , 55/2ಬಿ2, 56/2ಎ. 56/2ಬಿ 56/3ಎ1, 57/1, 57/2, 57/3 63/3ಎ, 64, 66/2, ಸರ್ಕಾರಿ ಉತ್ತನಹಳ್ಳಿ ಗ್ರಾಮದ ಮೋಜಣಿ ಸಂಖ್ಯೆ 199/1, 200/2, 201/1, 201/2, 201/3 ಮತ್ತು ಹಡಜನ ಗ್ರಾಮದ ಮೋಜಣಿಸಂಖ್ಯೆ 185/1ರ ಒಟ್ಟು ವಿಸ್ತೀರ್ಣ 21 ಎಕರೆ 30.5 ಗುಂಟೆ ಜಮೀನನ್ನು ವ್ಯವಸಾಯ ವಲಯದಿಂದ ವಸತಿ ಉದ್ದೇಶಕ್ಕೆ ಭೂ ಉಪಯೋಗ ಬದಲಾವಣೆ ಮಾಡಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರದ ಅನುಮೋದನೆ ನೀಡಲಾಗಿದೆ.

1 ಪ್ರಸ್ತಾಪಿತ ಜಮೀನಿನ ಭೂ ಉಪಯೋಗ ಬದಲಾವಣೆ ಸಂಬಂಧ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆಯ ಕಲಂ 18ರನ್ವಯ ಶಾಸನಬದ್ದ ಶುಲ್ಕವನ್ನು ಅರ್ಜಿದಾರರು ಪ್ರಾಧಿಕಾರಕ್ಕೆ ಪಾವತಿಸತಕ್ಕದ್ದು.

2 ಈ ಭೂ ಉಪಯೋಗ ಬದಲಾವಣೆಯನ್ನು ಮಹಾ ಯೋಜನೆಯಲ್ಲಿ ಪ್ರಾಧಿಕಾರವು ಅಳವಡಿಸಿಕೊಳ್ಳತಕ್ಕದ್ದು..

3 ಪ್ರಸ್ತಾಪಿತ ಜಮೀನಿನಲ್ಲಿ ಯಾವುದೇ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳುವ ಮುನ್ನ ಅನುಮೋದಿತ ವಲಯ ನಿಯಮಾವಳಿಗಳನ್ವಯ ವಸತಿ ವಿನ್ಯಾಸಕ್ಕೆ ನಗರಾಭಿವೃದ್ಧಿ ಪ್ರಾಧಿಕಾರದಿಂದ ಅನುಮೋದನೆ ಪಡೆಯತಕ್ಕದ್ದು.

4 ಮಾಸ್ಟರ್‌ಪ್ಲಾನ್ ಪರಿಷ್ಕರಣೆ ಸಂದರ್ಭದಲ್ಲಿ ಯೋಜನೆಯಲ್ಲಿ ಅಳವಡಿಸಬಹುದಾದ ಉದ್ದೇಶಿತ ರಸ್ತೆ ಪರಿಚಲನೆಗೆ ಬೇಕಾಗುವ ಅಗತ್ಯ ಜಮೀನನ್ನು ಬಿಟ್ಟುಕೊಡತಕ್ಕದ್ದು.

5 ಅರ್ಜಿದಾರರೇ ಸದರಿ ಜಮೀನಿನಲ್ಲಿ ಮೂಲಭೂತ ಸೌಕರ್ಯಗಳನ್ನು ಒದಗಿಸಿಕೊಳ್ಳತಕ್ಕದ್ದು.

6 ಸದರಿ ಜಮೀನಿನಲ್ಲಿ ಮಳೆ ನೀರಿನ ನೀರು ಸಂಗ್ರಹಣೆ ತೊಟ್ಟಿ (Rain water harvesting storage) ವ್ಯವಸ್ಥೆಯನ್ನು ಅರ್ಜಿದಾರರೇ ರೂಪಿಸಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ ,

ಪಿ.ಆರ್. 110

**ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ

**ವಿಷಯ :** ಕೋಟನೂರ–ಡಿ ಅಭಿವೃದ್ಧಿ ಯೋಜನೆಯಡಿ 5.00 ಲಕ್ಷ ಲೀಟರ್ ಸಾಮರ್ಥ್ಯದ ಮೇಲ್ಮಟ್ಟ ಜಲ ಸಂಗ್ರಹಗಾರ ನಿರ್ಮಾಣ ಸಹಿತ ನೀರು ಸರಬರಾಜು ಕಾಮಗಾರಿಗೆ ಟೆಂಡರ್ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ :** 1 ಸರ್ಕಾರಿ ಆದೇಶ ಸಂಖ್ಯೆ:ನಅಇ 521 ಎಂಐಬಿ 1999, ದಿನಾಂಕ:12.2.2001

2 ಪ್ರಾಧಿಕಾರದ ಟೆಂಡರ್ ಪ್ರಕಟಣೆ (4ನೇ ಕರೆ) ಸಂಖ್ಯೆ:251, ದಿ:17–5–2008.

3 ಪ್ರಾಧಿಕಾರದ ಪತ್ರ ಸಂಖ್ಯೆ:ನಪ್ರಾಗು/ಡಿಬಿ/ಕೋ–ಡಿ/ನೀ.ಸ./2007–08/1110, ದಿ:15.10.2008.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1)ರ ಸರ್ಕಾರಿ ಆದೇಶದಲ್ಲಿ ಗುಲ್ಬರ್ಗಾ ನಗರಾಭಿವೃದ್ಧಿ ಪ್ರಾಧಿಕಾರವು ಕೋಟನೂರು–ಡಿ ಗ್ರಾಮದ ಸರ್ವೆ ನಂ 18(ಭಾಗ), 19 (ಭಾಗ) 30 ಮತ್ತು 32 (ಭಾಗ) ಪ್ರದೇಶದಲ್ಲಿನ ವಸತಿ ಯೋಜನೆಯನ್ನು ರೂ. 431.00 ಲಕ್ಷಗಳ ಅಂದಾಜಿನಲ್ಲಿ ಕೈಗೊಳ್ಳಲು ಹಲವು ಷರತ್ತುಗಳಿಗೊಳಪಡಿಸಿ ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

ಈ ಯೋಜನೆಯಲ್ಲಿ ನೀರು ಸರಬರಾಜು ಯೋಜನೆ ಕುರಿತು ಒಟ್ಟು ರೂ. 80.30 ಲಕ್ಷಗಳಿಗೆ ತಾಂತ್ರಿಕ ಅನುಮೋದನೆಯನ್ನು ಪ್ರಾಧಿಕಾರವು ಮುಖ್ಯ ಇಂಜಿನಿಯರ್ ಕರ್ನಾಟಕ ನಗರ ನೀರು ಸರಬರಾಜು ಒಳಚರಂಡಿ ಮಂಡಳಿ, ಧಾರವಾಡ ರವರಿಂದ ಪಡೆದಿದ್ದು, ಅದರಂತೆ ಐಟಂವಾರು ಕಾಮಗಾರಿಗಳಿಗಾಗಿ ದಿನಾಂಕ:28.2.2008, 29–3–2008 ಮತ್ತು 31.5.2008 ರಂದು ಟೆಂಡರ್ ಪ್ರಕಟಣೆಗಳನ್ನು 3 ಬಾರಿ ಹೊರಡಿಸಿದ್ದು, ದಿನಾಂಕ:31–5–2008 ರಂದು ಪ್ರಕಟವಾದ ಟೆಂಡರ್ ಬುಲೆಟಿನ್‌ಗೆ ಒಬ್ಬರೇ ಗುತ್ತಿಗೆದಾರರಾದ ಶ್ರೀ ಮಡೆಪ್ಪ ಎಸ್., ಗುತ್ತಿಗೆದಾರರು ರವರು ಟೆಂಡರ್ ಗಿಟ್ಟ (2004–05ನೇ ಸಾಲಿನ ದರಪಟ್ಟಿಯಂತೆ) ಅಂದಾಜು ಮೊತ್ತ ರೂ. 62,50,000 ಕ್ಕೆ ಶೇ. 89.64 ರಷ್ಟು ಹೆಚ್ಚಿಸಿ ಒಟ್ಟು ರೂ. 1,17,66,973 ಗಳಿಗೆ ನಮೂದಿಸಿದ್ದು, ಈ ದರವು 2007–08ನೇ ಸಾಲಿನ ದರಪಟ್ಟಿಗೆ ಶೇ. 24.98 ಅಧಿಕವಾಗಿದ್ದು, 2008–09ನೇ ಸಾಲಿನ ಅನುಮೋದಿತ ದರಪಟ್ಟಿಗೆ ಶೇ. 19.43 ರಷ್ಟು ಹೆಚ್ಚಾಗಿರುತ್ತದೆ. ಈ ಬಡಾವಣೆಯಲ್ಲಿ ಸಾಕಷ್ಟು ಮನೆಗಳು ನಿರ್ಮಾಣವಾಗುತ್ತಿದ್ದು, ನೀರು ಸರಬರಾಜಿಗಾಗಿ ಸಾರ್ವಜನಿಕರು ಒತ್ತಾಯಿಸುತ್ತಿರುವುದರಿಂದ 5 ಲಕ್ಷ ಲೀಟರ್ ಸಾಮರ್ಥ್ಯದ ಮೇಲ್ಮಟ್ಟದ ಟ್ಯಾಂಕ್ ನಿರ್ಮಾಣ, ಪೈಪ್ ಲೈನ್ ಅಳವಡಿಕೆ ಕಾಮಗಾರಿಗಳನ್ನು ಕೋಟನೂರು–ಡಿ ಅಭಿವೃದ್ಧಿ ಯೋಜನೆಯಡಿ ಕೈಗೆತ್ತಿಕೊಳ್ಳಲು ಶ್ರೀ ಮಡೆಪ್ಪ ಎಸ್. ರವರ ಟೆಂಡರ್ ಗುತ್ತಿಗೆಯನ್ನು ರೂ. 1,17,66,973 ಗಳಿಗೆ ಅನುಮೋದನೆ ನೀಡಲು ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಗುಲ್ಬರ್ಗಾ ರವರು ಮೇಲೆ ಓದಲಾದ ಕ್ರಮಾಂಕ (3)ರಲ್ಲಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.,

ಮೇಲೆ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ನಅಇ 46 ಗುಅಪ್ರಾ 2008, ಬೆಂಗಳೂರು, ದಿನಾಂಕ:27ನೇ ನವೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕೋಟನೂರ–ಡಿ ಅಭಿವೃದ್ಧಿ ಯೋಜನೆಯಡಿ 5.00 ಲಕ್ಷ ಲೀಟರ್ ಸಾಮರ್ಥ್ಯದ ಮೇಲ್ಮಟ್ಟ ಜಲ ಸಂಗ್ರಹಗಾರ ನಿರ್ಮಾಣ ಸಹಿತ ನೀರು ಸರಬರಾಜು ಕಾಮಗಾರಿಗೆ ಶ್ರೀ ಮಡೆಯಪ್ಪ ಎಸ್., ಗುತ್ತಿಗೆದಾರರು ನಮೂದಿಸಿರುವ ರೂ. 1,17,66,973 ಗಳ ಗುತ್ತಿಗೆಯನ್ನು ಕರ್ನಾಟಕ ನಗರ ನೀರು ಸರಬರಾಜು ಒಳಚರಂಡಿ ಮಂಡಳಿಯ 2008–09ನೇ ಸಾಲಿನ ಅನುಮೋದಿತ ದರಪಟ್ಟಿಗೆ ಶೇ. 19.43 ರಷ್ಟು ಹೆಚ್ಚು ಮೊತ್ತಕ್ಕೆ ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ಸರ್ಕಾರವು ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

(1) ಸದರಿ ಯೋಜನೆಯನ್ನು ನಿಗಧಿತ ವೇಳೆಯಲ್ಲಿ ಪೂರ್ಣಗೊಳಿಸುವುದು.

(2) ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡತಕ್ಕದ್ದಲ್ಲ.

(3) ಕಾಮಗಾರಿಗಳನ್ನು ಕೈಗೊಳ್ಳಲು ಪ್ರಾಧಿಕಾರವು ತನ್ನ ಸ್ವಂತ ಸಂಪನ್ಮೂಲಗಳನ್ನು ಬಳಸಿಕೊಳ್ಳತಕ್ಕದ್ದು ಮತ್ತು ಸರ್ಕಾರದಿಂದ ಯಾವುದೇ ಆರ್ಥಿಕ ಸಹಾಯವನ್ನು ನೀಡಲಾಗುವುದಿಲ್ಲ.

(4) ಸದರಿ ಕಾಮಗಾರಿಯನ್ನು ಕೈಗೊಳ್ಳುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ನಿಯಮ 2000ನ್ನು ಪಾಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ ,

ಪಿ.ಆರ್. 173

**ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ

## ವಸತಿ ಸಚಿವಾಲಯ

**ವಿಷಯ :** ನಿರ್ಮಲಜ್ಯೋತಿ 2ನೇ ಹಂತದ ಕಾಮಗಾರಿಗಳಿಗೆ 2008–09ನೇ ಸಾಲಿನ ಆಯವ್ಯಯದಲ್ಲಿ ಒದಗಿಸಿರುವ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** 1 ಸರ್ಕಾರದ ಆದೇಶ ಸಂಖ್ಯೆ:ವಇ 26 ಕೊಮಂಲೆ, 07, ಬೆಂಗಳೂರು, ದಿನಾಂಕ:7.1.2008

2 ಸರ್ಕಾರದ ಆದೇಶ ಸಂಖ್ಯೆ:ವಇ 26 ಕೊಮಂಲೆ, 07, ಬೆಂಗಳೂರು, ದಿನಾಂಕ:29.3.2008

3 ಆಯುಕ್ತರು, ಕಕೊನಿಮ, ಬೆಂಗಳೂರು ಇವರ ಪತ್ರ ಸಂಖ್ಯೆ:ಕಕೊನಿಮ/ಲೆಪಶಾ/ಅನುದಾನ:ನಿಜ್ಯೋ: 2:2008–09, ದಿನಾಂಕ:28.8.2008.

4 ಸರ್ಕಾರದ ಆದೇಶ ಸಂಖ್ಯೆ:ವಇ 26 ಕೊಮಂಲೆ, 07, ಬೆಂಗಳೂರು, ದಿನಾಂಕ:4.9.2008

5 ಆಯುಕ್ತರು, ಕಕೊನಿಮ, ಬೆಂಗಳೂರು ಇವರ ಪತ್ರ ಸಂಖ್ಯೆ:ಕಕೊನಿಮ/ ಲೆಪಶಾ/ ಅನುದಾನ: ನಿಜ್ಯೋ: 2:2008–09, ದಿನಾಂಕ:13.10.2008

**ಪ್ರಸ್ತಾವನೆ:**

ನಿರ್ಮಲ ಜ್ಯೋತಿ ಯೋಜನೆಯನ್ನು ರೂ. 40.00 ಕೋಟಿಗಳಿಗೆ ಸೀಮಿತಗೊಳಿಸಿ ಸ್ಥಗಿತಗೊಳಿಸಬೇಕೆಂಬ ಷರತ್ತಿನೊಂದಿಗೆ ರೂ. 36.39 ಕೋಟಿ ಹಾಗೂ ಅನಂತರದ ಆಯುಕ್ತರ ಕೋರಿಕೆ/ಪ್ರಸ್ತಾವನೆ ಮೇರೆಗೆ ರೂ. 3,61 ಕೋಟಿ ಒಟ್ಟು 40.00 ಕೋಟಿ ಹಣವನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (1) ಮತ್ತು (2) ರ ಆದೇಶದನ್ವಯ ಮಂಡಳಿಗೆ ಬಿಡುಗಡೆ ಮಾಡಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿ ಆಯುಕ್ತರು 2008–09ನೇ ಸಾಲಿನ ಆಯವ್ಯಯದಲ್ಲಿ ನಿರ್ಮಲ ಜ್ಯೋತಿ ಕಾಮಗಾರಿಗಳಿಗೆ ರೂ. 2000.00 ಲಕ್ಷಗಳ ಅನುದಾನವನ್ನು ಒದಗಿಸಲಾಗಿದೆ. ಅಲ್ಲದೆ ಕಾಮಗಾರಿಗಳ ಪ್ರಗತಿಯಲ್ಲಿರುವುದರಿಂದ ರೂ. 1000.00 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲು ಸಲ್ಲಿಸಿದ ಪ್ರಸ್ತಾವನೆಯ ಮೇಲೆ ಓದಲಾದ ಕ್ರಮ ಸಂಖ್ಯೆ (4)ರಲ್ಲಿ 1ನೇ ಮತ್ತು 2ನೇ ತ್ರೈಮಾಸಿಕ ಸೇರಿ ಒಟ್ಟು 1000.00 ಲಕ್ಷಗಳ ಅನುದಾನವನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ ಅವರ ಆರ್ಥಿಕ ವ್ಯಾಪ್ತಿಯಲ್ಲಿ ಬಿಡುಗಡೆ ಮಾಡಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (5)ರಲ್ಲಿ ಮಂಡಳಿಯ ಆಯುಕ್ತರು ಈಗಾಗಲೇ ನಿರ್ಮಲ ಜ್ಯೋತಿ ಯೋಜನೆ ಕಾಮಗಾರಿಗಳು ಶೇಕಡ 80 ರಿಂದ 90 ರಷ್ಟು ಭೌತಿಕ ಪ್ರಗತಿಯನ್ನು ಸಾಧಿಸಿದ್ದು, 2008–09 ಸಾಲಿನ ಆಯವ್ಯಯದಲ್ಲಿ ಬಾಕಿ ಇರುವ ಮೊತ್ತ ರೂ. 1000.00 ಲಕ್ಷಗಳನ್ನು ಮಂಡಳಿಗೆ ಬಿಡುಗಡೆ ಮಾಡಲು ಹಾಗೂ ಡಿಸೆಂಬರ್ 2008ರ ಅಂತ್ಯದೊಳಗೆ ಆರ್ಥಿಕವಾಗಿ ಹಾಗೂ ಭೌತಿಕವಾಗಿ ಪೂರ್ಣಗೊಳಿಸಲಾಗುವುದು. ಸದರಿ ಯೋಜನೆ ಮಂಜೂರಾತಿಯಂತೆ ಪೂರ್ಣಗೊಳಿಸಲು ಬೇಕಾಗಿರುವ ಉಳಿಕೆ ಮೊತ್ತ ರೂ. 1111.91 ಲಕ್ಷಗಳನ್ನು 2008–09ನೇ ಸಾಲಿನ ಪೂರಕ ಆಯವ್ಯಯದಲ್ಲಿ ಬಿಡುಗಡೆ ಮಾಡಬೇಕೆಂದು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ವ ಇ 26 ಕೊಮಂಲೆ 2007, ಬೆಂಗಳೂರು ದಿನಾಂಕ:15ನೇ ಜನವರಿ 2009**

ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿರವರ ಪ್ರಸ್ತಾವನೆಯಂತೆ ನಿರ್ಮಲ ಜ್ಯೋತಿ ಯೋಜನೆಯ 2ನೇ ಹಂತದ ಕಾಮಗಾರಿಗಳಿಗೆ 2008–09ನೇ ಸಾಲಿನ ಆಯವ್ಯಯದಲ್ಲಿ ಕೊಳಚೆ ಸುಧಾರಣೆ ಯೋಜನೆಯ ಲೆಕ್ಕ ಶೀರ್ಷಿಕೆ 2217–04–191–2–02 ರಡಿಯಲ್ಲಿ ಬಾಕಿ ಇರುವ ಮೊತ್ತ ರೂ. 1000.00 ಲಕ್ಷಗಳ (ರೂಪಾಯಿ ಒಂದು ಸಾವಿರ ಲಕ್ಷ ಮಾತ್ರ) ಅನುದಾನವನ್ನು ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ ಈಗಾಗಲೇ ನಿರ್ಮಲ ಜ್ಯೋತಿ ಯೋಜನೆಯನ್ನು ಅನುಷ್ಠಾನಗೊಳಿಸುವಲ್ಲಿ ಇರುವ ಸೂಚನೆಗಳನ್ನು ಪಾಲಿಸಬೇಕೆಂಬ ಷರತ್ತಿಗೆ ಒಳಪಟ್ಟು ಬಿಡುಗಡೆ ಮಾಡಲಾಗಿದೆ.

ಹೆಚ್ಚುವರಿ ಅನುದಾನದ ಅವಶ್ಯಕತೆ ಇದ್ದಲ್ಲಿ ಮಂಡಳಿಗೆ ಸರ್ಕಾರವು ಈಗಾಗಲೇ ಬಿಡುಗಡೆ ಮಾಡಲಾಗಿರುವ ಅನುದಾನದ ಬಳಕೆ ಬಗ್ಗೆ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿ ಆಯವ್ಯಯದ ಮುಕ್ತಾಯದ ಅವಧಿಯೊಳಗೆ ಸರ್ಕಾರಕ್ಕೆ ಹೆಚ್ಚುವರಿ ಅನುದಾನದ ಪ್ರಸ್ತಾವನೆ ಸಲ್ಲಿಸಬಹುದಾಗಿರುತ್ತದೆ.

ಈ ಮೊತ್ತವನ್ನು ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಯು ವಸತಿ ಇಲಾಖೆಯ ಉಪ ಕಾರ್ಯದರ್ಶಿಯವರ ಮೇಲು ಸಹಿ ಪಡೆದ ನಂತರ ಪಡೆಯತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಹಿಂಬರಹ ಸಂಖ್ಯೆ:ಎಫ್‌ಡಿ 793 ವೆಚ್ಚ–9/2008, ದಿನಾಂಕ:3.1.2009ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ ,

ಪಿ.ಆರ್. 330

**ಜಿ.ಆರ್. ನಾಗರಾಜ**

ಪೀಠಾಧಿಕಾರಿ–4, ವಸತಿ ಇಲಾಖೆ

## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ

**ವಿಷಯ :** ಶ್ರೀ ಜಿ. ಚನ್ನಬಸಪ್ಪ, ಸಂಶೋಧನಾಧಿಕಾರಿ, ಭಾಷಾಂತರ ನಿರ್ದೇಶನಾಲಯ, ಬೆಂಗಳೂರು ಇವರ ವಿರುದ್ಧದ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ನಡೆಸಲು ವಿಚಾರಣಾಧಿಕಾರಿಗಳು ಹಾಗೂ ಮಂಡನಾಧಿಕಾರಿಗಳನ್ನು ನೇಮಿಸುವ ಬಗ್ಗೆ ಆದೇಶ

**ಓದಲಾಗಿದೆ :** 1 ಸರ್ಕಾರವು ಆಪಾದಿತ ನೌಕರರಿಗೆ ನೀಡಿದ ನೋಟೀಸು ಸಂಖ್ಯೆ:ಸಂವ್ಯಶಾಇ 46 ಭಾನಿವಿ 2006, ದಿನಾಂಕ:11.11.2006.

2 ಆಪಾದಿತ ನೌಕರರ ವಿವರಣಾ ಮನವಿ ಸಲ್ಲಿಕೆ ದಿನಾಂಕ:21.11.2008 ಮತ್ತು 24.11.2008.

3 ಸರ್ಕಾರದ ಸುತ್ತೋಲೆ ಸಂಖ್ಯೆ:ಲಾ 140 ಎಲ್ ಎಎಂ 2007, ದಿನಾಂಕ:29.3.2008.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಸರ್ಕಾರವು ಆಪಾದಿತ ನೌಕರರಾದ ಶ್ರೀ ಜಿ. ಚನ್ನಬಸಪ್ಪ, ಸಂಶೋಧನಾಧಿಕಾರಿ, ಭಾಷಾಂತರ ನಿರ್ದೇಶನಾಲಯ, ಇವರ ವಿರುದ್ಧ ದೋಷಾರೋಪಣಾ ಪಟ್ಟಿಯನ್ನು ಜಾರಿ ಮಾಡಿರುತ್ತದೆ. ಸದರಿ ದೋಷಾರೋಪಣಾ ಪಟ್ಟಿಯೊಂದಿಗೆ ಆಪಾದಿತ ನೌಕರರ ವಿರುದ್ಧ ಹೊರಿಸಲಾದ ಆರೋಪಗಳನ್ನು ಅನುಬಂಧ–1ರಲ್ಲಿ ಆರೋಪದ ವಿವರಗಳನ್ನು ಅನುಬಂಧ–2 ರಲ್ಲಿ ಆರೋಪಗಳನ್ನು ದೃಢಪಡಿಸುವ ದಾಖಲೆಪಟ್ಟಿಗಳನ್ನು ಅನುಬಂಧ–3ರಲ್ಲಿ ಹಾಗೂ ಆರೋಪ ಗಳನ್ನು ಸಮರ್ಥಿಸುವ ಸಾಕ್ಷಿಗಳನ್ನು ಅನುಬಂಧ–4ರಲ್ಲಿ ನೀಡಲಾಗಿದೆ.

ಮೇಲೆ (2)ರಲ್ಲಿ ಆಪಾದಿತ ನೌಕರರು ತಮ್ಮ ವಿರುದ್ಧ ಸಲ್ಲಿಸಲಾದ ಆರೋಪಗಳ ಬಗ್ಗೆ ವಿವರಣೆಯನ್ನು ಸಲ್ಲಿಸಿರುತ್ತಾರೆ. ಸದರಿ ವಿವರಣೆ ತೃಪ್ತಿಕರವಲ್ಲದ ಕಾರಣ, ಆಪಾದಿತ ನೌಕರರ ವಿರುದ್ಧ 1957ರ ಕರ್ನಾಟಕ ಸಿವಿಲ್ ಸೇವಾ(ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಯ 11ನೇ ನಿಯಮದ ರೀತ್ಯಾ ವಿಚಾರಣೆ ನಡೆಸಲು ಶಿಸ್ತುಪ್ರಾಧಿಕಾರವು ನಿರ್ಣಯಿಸಿರುತ್ತದೆ.

ಮೇಲೆ (3)ರಲ್ಲಿ ಸರ್ಕಾರವು, 1957ರ ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಯ 11ನೇ ನಿಯಮದ ರೀತ್ಯಾ ಇಲಾಖೆ ವಿಚಾರಣೆಯನ್ನು ನಡೆಸಲು ಹಾಗೂ ಸದರಿ ವಿಚಾರಣೆಯನ್ನು ನಿವೃತ್ತ ನ್ಯಾಯಾಧೀಶರುಗಳಿಗೆ ವಹಿಸಲು ಸುತ್ತೋಲೆ ಹೊರಡಿಸಿರುತ್ತದೆ.

ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಸಂವ್ಯಶಾಇ 46 ಭಾನಿವಿ 2006, ದಿನಾಂಕ:27ನೇ ಡಿಸೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವೆ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು, ಶ್ರೀ ಜಿ. ಚನ್ನಬಸಪ್ಪ, ಸಂಶೋಧನಾಧಿಕಾರಿ, ಭಾಷಾಂತರ ನಿರ್ದೇಶನಾಲಯ, ಬೆಂಗಳೂರು ಇವರ ಮೇಲಿನ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ನಡೆಸಲು ಶ್ರೀ ಎನ್. ಸುಬ್ಬರಾವ್ ನಿವೃತ್ತ ಜಿಲ್ಲಾ ಸೆಷನ್ಸ್ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವೆಗಳ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, ನಿಯಮ 11(5)(c)ರಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀ ಹೆಚ್. ರಾಜ್ ಕುಮಾರ್, ಶಾಖಾಧಿಕಾರಿ, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ ಇವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸಲಾಗಿದೆ.

ಸದರಿ ಇಲಾಖಾ ವಿಚಾರಣೆಯನ್ನು ಈ ಆದೇಶದ ದಿನಾಂಕದಿಂದ ಮೂರು ತಿಂಗಳೊಳಗಾಗಿ ಪೂರ್ಣಗೊಳಿಸಿ ಸರ್ಕಾರಕ್ಕೆ ವರದಿಯನ್ನು ಸಲ್ಲಿಸಲು ಸೂಚಿಸಲಾಗಿದೆ. ಸದರಿ ಇಲಾಖಾ ವಿಚಾರಣಾಧಿಕಾರಿಗಳಿಗೆ ಇಲಾಖಾ ವಿಚಾರಣೆ ನಡೆಸಲು ಸೂಕ್ತ ಸ್ಥಳ ಹಾಗೂ ಶೀಘ್ರಲಿಪಿಗಾರರ ವ್ಯವಸ್ಥೆಯನ್ನು ಮಾಡುವಂತೆ ನಿರ್ದೇಶಕರು, ಭಾಷಾಂತರ ನಿರ್ದೇಶನಾಲಯಕ್ಕೆ ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ ,

ಪಿ.ಆರ್. 231

**ಜಿ. ಶ್ರೀಧರ್**

ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿ,

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ

## WOMEN & CHILD DEVELOPMENT SECRETARIAT

**Sub :** Appointment of CRISIL Ltd., Mumbai as consultant for selecting Fund Manager and Central Record keeping Agency for implementation of Bhagyalakshmi scheme.

**Read :**
1) Government Order No. WCD 99 SWW 2007 dt:17.10.2008
2) Government Order No. WCD 152 SWW 2008 dt:14.8.2008
3) Government Order No. WCD 152 SWW 2008 dt:6.9..2008

**Preamble:**

In order to show the State Government's concern for the girl child and change society's attitude towards her, in the order read at (1) above, Government of Karnataka have sanctioned 'Bhagyalakshmi' scheme under which Government of Karnataka would deposit Rs. 10,000/- in the name of girl child born in BPL family, so that the said beneficiary would get the deposited amount along with interest on attaining the age of 18 years subject to fulfillment of conditions laid down in the said Order.

In the Order read at (2) above,'' Bhagyalakshmi'' Scheme has been partially modified, inter alia, revising the amount to be deposited in the name of the beneficiary, so that the girl child would get an amount of not exceeding Rs. 1,00,000/- on attaining the age of 18 years and also she would be entitled to procure a loan of Rs. 50,000/- on attaining the age $15^{th}$ year if she desires to study further after passing Secondary Schoold Leaving Certificate, by mortgaging the fixed deposit bond issued by the selected financial institution, in any Scheduled Bank, The said Government Order also provides for selecting a Central Record Keeping Agency in line with guidelines of the Pension Regulatory Fund and Development Authority Government of India for maintaining and protecting the records of the beneficiaries and a partner financial institution, which will maximize the amount deposited in the name of the beneficiary, so that the beneficiary would get an amount not exceeding Rs. 1,00,000/- on attaining the age of 18 years. The said two external Agencies will have to be selected in accordance with the Karnataka Transparency Public Procurement Act, 1999 and the Rules made there under.

In the Government Order read at (3) above, pending selection of the said two External Agencies, sanction has been accorded to implement the Revised 'Bhagyalakshmi' Scheme sanctioned in the Order read at (2) above, in co-ordination of Life Insurance Corporation of India for a period of three months OR till selection of Partner Financial Institution whichever is earlier.

In order to take steps for selecting the two External Agencies, a meeting was held on Dt: 18-8-2008, along with the Secretary to Government.,FD (B&R) and Sri K.P. Krishnan, Joint Secretary, Department of Economic Affairs, Government of India, Having regard, to take immediate steps within a time frame and also prescribe conditions and modalities to be followed by the said the two External Agencies to be selected. It was felt necessary to appoint Messrs. CRISIL Ltd., Mumbai as consultant to assist the Government of Karnataka for selecting the said two External Agencies.

Messrs. CRISIL Ltd., Mumbai is India's leading writings, research and policy and advisory company having unimpeachable credibility and unmatched, analytical rigour having assisted in the past. Employees Provident Fund Organisation, Pension Fund Regulatory and Development Authority and Coal Mines Provident Fund Organisations in selecting Investment Managers to manage their respective Retirement Schemes.

Messrs. CRISIL Ltd., Mumbai have proposed for their appointment as consultant for selecting a suitable Central Record Keeping Agency and Investment Managers, so that the minimum amount deposited in the name of the beneficiary could fetch a maximum of Rs, 1,00,000/- to the beneficiary on attaining the age of 18 years on payment of fee of Rs 25,00,000/- along with applicable taxes for the main

assignment and Rs. 7,00,000./- along with applicable taxes for one year's assignment for monitoring of AMC 's performance along with the terms and conditions.

After careful scrutiny of the proposal of Messrs. CRISIL Ltd., Mumbai and pending issue of exemption under Section 4 (g) of the Karnataka Transparency in Public procurement Act 1999, the following Orders are issued.

**Order No .WCD 152 SWW 08, Bangalore, Dated:16th December 2008**

Sanction has been accorded to appoint Messrs. CRISIL Ltd., Mumbai as consultant on a fee of Rs 25,00,000/- (Rs Twentyfive lakhs only) along with applicable taxes but inclusive of travel and out of pocket expenses for assisting the Governemnt of Karnataka to select suitable External Agency as Central Record Keeping Agency for maintaining the records of the beneficiaries under 'Bhagyalakshmi' Scheme and another External Agency as Investment Manager for depositing amounts in the names of beneficiaries, so that the beneficiaries could secure not more than Rs. 1,00,000/- on attaining the age of 18 years besides having liberty to secure a maximum loan of 50,000/- by mortgaging the Fixed Deposit Bond/Receipt on attaining the 15th year of age for pursuing studies further to passing of Secondary School Leaving Certificate to perform the following in assisting the Government of Karnataka to select the said two External Agencies:

1. Preparing of request of a aproposal for selection of Investment Managers.
2. To prepare tender document.
3. Preparation of the evaluation of frame work for selection of Investment Managers.
4. Developing frame work for monitoring the performance of the chosen Investment Managers which would also include among others the methodology for development of a bench mark index.
5. Framing Investment Pattern for management of the fund under ''Bhagyalakshmi'' Scheme.
6. Preparation of the Investment Management Agreement to be entered into between the Government of Karnataka and the selected Investment Managers.
7. Studying the frame work for the verification process of the scheme and assisting the Government in developing MIS formats in which the data collected by the fleet on street, in this process can be sent to the Central Record Keeping Agency, so as to ensure optimal effectiveness of the functioning of the CRA.
8. Studying the current trustee organization structure and composition and suggest steps for improvement, if any.
9. Preparation of request, for proposal for selection of Central Record Keeping Agency.
10. Preparation of the evaluation frame work for selection of the CRA
11. Drafting of agreement to be entered into between the Government and the selected CRA
12. Monitoring the investment performance of the selected Investment Managers for a year which would include inter alia, the maintainance of an appropriate bench mark index to be developed for this purpose.

The aaforesaid assignment shall be completed in accordance with the time frame, to be prescribed, as would be mutually agreed upon.

Sanction has also been accorded to CRISIL for monitoring of AMC 's performance for a period of one year on a fee of Rs .7,00,000/- (Rs Seven lakhs only) along with aplicable taxes inclusive of travel and out of pocket expenses.

Sanction has been accorded to the Director, Women & Child Development Department to enter into an agreement with Messrs .CRISIL Ltd., Mumbai in terms of the above.

Orders granting exemption to Messrs. CRISIL Ltd., Mumbai under the provisions of the Karnataka Transparency in Public Procurement Act 1999 shall be issued separately.

The expenditure in this regard shall be borne under ''Bhagyalakshmi Scheme-2235-02-102-0-25-100(P)''

This Order issues with the concurrence of the Finance Department vide their No. 4951/SECY (B&R)/2008 dt:16.12.2008.

By order and in the name of the Governor of Karnataka

**D.S. ASHWATH**

P.R. 205

Secretary to Government,

Women & Child Development Department

## ಆರ್ಥಿಕ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆಯಲ್ಲಿ ಅಬಕಾರಿ ಅಧಿಕಾರಿ /ಸಿಬ್ಬಂದಿ ಕರ್ತವ್ಯಲೋಪದ ಬಗ್ಗೆ ಅಬಕಾರಿ ಉಪ ಆಯುಕ್ತರಾಗಿದ್ದ ಶ್ರೀ ತಿಪ್ಪಣ್ಣ ಬಿ. ಕೊಂಡಾಪುರ್ ಮತ್ತು ಶ್ರೀ ಎ.ಎಸ್. ಮಂಗಾಣಿ, ಅಬಕಾರಿ ಅಧೀಕ್ಷಕರು, ಗುಲ್ಬರ್ಗಾ ಅಬಕಾರಿ ಜಂಟಿ ಆಯುಕ್ತರ ಕಛೇರಿ, ಗುಲ್ಬರ್ಗಾ ರವರುಗಳ್ನು ಕರ್ತವ್ಯಲೋಪಕ್ಕಾಗಿ ಅಮಾನತ್ತುಗೊಳಿಸಲಾಗಿರುವ ಬಗ್ಗೆ.

**ಓದಲಾಗಿದೆ :**
1 ಅಬಕಾರಿ ಆಯುಕ್ತರ ಪತ್ರ ಸಂಖ್ಯೆ:ಇಸಿಇ 13 ಡಿಎಸ್‌ಸಿ (2) 2008, ದಿನಾಂಕ:4.10.2008.
2 ಅಬಕಾರಿ ಜಂಟಿ ಆಯುಕ್ತರು (ಜಾರಿ ಮತ್ತು ತನಿಖೆ), ಗುಲ್ಬರ್ಗಾ ವಿಭಾಗ ಇವರ ವರದಿ ಸಂಖ್ಯೆ:ಜೆಸಿಇ/ಆಡಳಿತ/08–09, ದಿನಾಂಕ:3.10.2008.
3 ಸರ್ಕಾರದ ಆದೇಶ ಸಂಖ್ಯೆ:ಆಇ 192 ಇಪಿಎಸ್ 2008, ದಿನಾಂಕ:10.10.2008.
4 ಶ್ರೀ ಎ.ಎಸ್. ಮಂಗಾಣಿ, ಅಬಕಾರಿ ಅಧೀಕ್ಷಕರು (ಅಮಾನತ್ತಿನಲ್ಲಿ) ರವರು ಸರ್ಕಾರಕ್ಕೆ ಸಲ್ಲಿಸಿರುವ ಮನವಿ ದಿನಾಂಕ:22.10.2008.

**ಪ್ರಸ್ತಾವನೆ:**

ಮೇಲೆ ಓದಲಾದ (1) ಮತ್ತು (2)ರ ಉಲ್ಲೇಖಿತ ಪತ್ರಗಳಲ್ಲಿ ಗುಲ್ಬರ್ಗಾ ಜಿಲ್ಲೆಯ ಆಳಂದ, ಚಿಂಚೋಳಿ ಅಫಜಲ್ ಪುರ ಮತ್ತು ಯಾದಗಿರಿ ವಲಯ/ತಾಲ್ಲೂಕುಗಳಲ್ಲಿ ಅಕ್ರಮ ಅಬಕಾರಿ ಚಟುವಟಿಕೆಗಳು ನಡೆಯುತ್ತಿರುವ ಬಗ್ಗೆ ಅಲ್ಲಿನ ಸ್ಥಳೀಯ ಅಬಕಾರಿ ಅಧಿಕಾರಿಗಳು/ಸಿಬ್ಬಂದಿ ವರ್ಗದವರು ಸೂಕ್ತ ಕ್ರಮ ಜರುಗಿಸದೇ ಕರ್ತವ್ಯ ನಿರ್ಲಕ್ಷ್ಯತೆ ಮತ್ತು ಕರ್ತವ್ಯಲೋಪವೆಸಗಿರುವ ಬಗ್ಗೆ ಗುಲ್ಬರ್ಗಾ ಜಿಲ್ಲೆಯ ಅಬಕಾರಿ ಅಧೀಕ್ಷಕರಾಗಿ (EIB ಮುಖ್ಯಸ್ಥರು) ದಿನಾಂಕ:18.1.2006 ರಿಂದ 31.3.2008ರ ವರೆಗೆ ಕಾರ್ಯ ನಿರ್ವಹಿಸಿದ್ದ ಶ್ರೀ ಎ.ಎಸ್. ಮಂಗಾಣಿ, ಅಬಕಾರಿ ಅಧೀಕ್ಷಕರವರನ್ನು ಉಲ್ಲೇಖ(3)ರಲ್ಲಿರುವ ಆದೇಶಾನುಸಾರ ಸಮಾನತ್ತುಗೊಳಿಸಲಾಗಿತ್ತು.

ಸದರಿ ಅಧಿಕಾರಿಯವರು ಸರ್ಕಾರಕ್ಕೆ ಸಲ್ಲಿಸಿರುವ ಉಲ್ಲೇಖ (4)ರಲ್ಲಿರುವ ದಿನಾಂಕ: 22.10.2008ರ ಮನವಿಯಲ್ಲಿ ಉದ್ದೇಶಿತ ಶಿಸ್ತು ಕ್ರಮವನ್ನು ಕೈಬಿಡಲು ಹಾಗೂ ಪುನರ್ ನೇಮಕಗೊಳಿಸಲು ಸರ್ಕಾರವನ್ನು ಕೋರಿರುತ್ತಾರೆ. ಇದಕ್ಕೆ ಪೂರಕವಾಗಿ ಅವರ ಪ್ರಭಾರದ ಅವಧಿಯಲ್ಲಿ ಒಟ್ಟು 325 ಮೊಕದ್ದಮೆಗಳನ್ನು ದಾಖಲು ಮಾಡಿದ್ದು, 1250 ಪ್ರಕಣಗಳಲ್ಲಿ ಅಂತಿಮ ವರದಿಯನ್ನು ಸಲ್ಲಿಸಿರುವುದಾಗಿ ಹಾಗೂ ಪ್ರಮುಖವಾಗಿ 13 ಪ್ರಕರಣಗಳಲ್ಲಿ ದಂಡನೆಯಾಗಿರುತ್ತದೆ ಎಂದು ತಿಳಿಸಿರುತ್ತಾರೆ.

ವಿಷಯವನ್ನು ಪರಿಶೀಲಿಸಿ, ಶ್ರೀ ಎ.ಎಸ್. ಮಂಗಾಣಿ, ಅಬಕಾರಿ ಅಧೀಕ್ಷಕರು ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಸದರಿಯವರ ಅಮಾನತ್ತನ್ನು ತೆರವು ಗೊಳಿಸಿ, ಸರ್ಕಾರದ ಸೇವೆಗೆ ಪುನರ್ ನೇಮಕ ಮಾಡಲು ಸರ್ಕಾರವು ನಿರ್ಧರಿಸಿರುತ್ತದೆ. ಆದ್ದರಿಂದ ಈ ಕೆಳಕಂಡಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಆಇ 192 ಇಪಿಎಸ್ 2008, ಬೆಂಗಳೂರು, ದಿನಾಂಕ:17ನೇ ಡಿಸೆಂಬರ್ 2008**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವ ಸಂದರ್ಭಗಳ ಹಿನ್ನೆಲೆಯಲ್ಲಿ ಶ್ರೀ ಎ.ಎಸ್ ಮಂಗಾಣಿ, ಅಬಕಾರಿ ಅಧೀಕ್ಷಕರು, ಅಬಕಾರಿ ಜಂಟಿ ಆಯುಕ್ತರ ಕಚೇರಿ ಗುಲ್ಬರ್ಗಾ ವಿಭಾಗ, ಗುಲ್ಬರ್ಗಾ ಇವರ ವಿರುದ್ದದ ಇಲಾಖಾ

ವಿಚಾರಣೆಯನ್ನು ಕಾಯ್ದಿರಿಸಿ, ಸದರಿಯವರ ಅಮಾನತ್ತನ್ನು ರದ್ದುಪಡಿಸಲು ಹಾಗೂ ಇವರನ್ನು ಸರ್ಕಾರದ ಸೇವೆಗೆ ಪುನರ್ ನೇಮಕಗೊಳಿಸಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎನ್. ಜಗದೀಶ್**

ಪಿ.ಆರ್. 200 ಸಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಅಬಕಾರಿ)

**ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ:ಮಮಇ 9 ಎಸ್‌ಜೆಡಿ 2008(ಭಾ) ಬೆಂಗಳೂರು, ದಿನಾಂಕ:10ನೇ ಡಿಸೆಂಬರ್ 2008**

ಸರ್ಕಾರದ ಅಧಿಸೂಚನೆ ಸಂಖ್ಯೆ:ಮಮಇ 9 ಎಸ್‌ಜೆಡಿ 2008 ದಿ:7–8–2008ರ 5ನೇ ಸಾಲಿನಲ್ಲಿ ನಮೂದಿಸಿರುವ ರೂ. 14050–350–14400–400–16800–450–19500–525–22650–600–25050ರ ವೇತನ ಶ್ರೇಣಿ ಎಂಬ ಬದಲಿಗೆ ರೂ. 7400–200–8800–260–10880–320–13120ರ ವೇತನ ಶ್ರೇಣಿ (ಪರಿಷ್ಕೃತ ವೇತನ ಶ್ರೇಣಿ ರೂ 14050–350–14400–400–16800–450–19500–525–22650–600–25050) ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ ,

**ಆರ್. ನರಸಿಂಹಯ್ಯ**

ಪಿ.ಆರ್. 206 ಸರ್ಕಾರದ ಅಧೀನ ಕಾರ್ಯದರ್ಶಿ–2(ಪ್ರಭಾರ),

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

**ವಿಷಯ :** ಶ್ರೀ ಜೆ.ಬಿ. ಕಿರಣ್, ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು (ಅಮಾನತ್ತಿನಲ್ಲಿರುವವರು) ಅರಸೀಕೆರೆ, ಇವರನ್ನು ಸೇವೆಗೆ ಪುನರ್ ಸ್ಥಾಪಿಸುವ ಬಗ್ಗೆ.

**ಓದಲಾಗಿದೆ :** ಸರ್ಕಾರಿ ಆದೇಶ ಸಂಖ್ಯೆ:ಮಮಇ 326/ಎಸ್ ಜೆಡಿ 2008, ದಿ:19.7.2008

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ:19–7–2008ರ ಆದೇಶದಲ್ಲಿ ಶ್ರೀ ಜಿ.ಬಿ. ಕಿರಣ್, ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಅರಸೀಕೆರೆ, ಹಾಸನ ಜಿಲ್ಲೆ, ಇವರನ್ನು ಶ್ರೀಮತಿ ಭಾಗ್ಯಬಾಯಿ ಕೋಂ ಕೆಂಪನಾಯ್ಕ ಎಂಬ ಮಹಿಳೆಯೊಂದಿಗೆ ಅನುಚಿತ ವರ್ತನೆ ಆರೋಪ ಕಾರಣಕ್ಕಾಗಿ ಸೇವೆಯಿಂದ ಅಮಾನತ್ತಿನಲ್ಲಿರಿಸಿ ಆದೇಶಿಸಿದೆ. ಸದರಿಯವರ ವಿರುದ್ಧ ಜಿಲ್ಲಾ ಪಂಚಾಯತ್, ಹಾಸನ ಇವರ ವತಿಯಿಂದ ಪರಿಶೀಲನಾ ಸಮಿತಿಯು ವಿಚಾರಣೆ ನಡೆಸುತ್ತಿದ್ದು, ಈ ಸಮಿತಿಯ ವರದಿಯು ಬಾಕಿ ಇರುತ್ತದೆ. ಪ್ರಕರಣವನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ ವಿಚಾರಣೆ ಬಾಕಿ ಇರಿಸಿ ಸದರಿ ಅಧಿಕಾರಿಯವರನ್ನು ಸಾರ್ವಜನಿಕ ಹಿತದೃಷ್ಟಿಯಿಂದ ಸೇವೆಗೆ ಪುನರ್ ಸ್ಥಾಪಿಸಲು ನಿರ್ಧರಿಸಿ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಮಮಇ 326 ಎಸ್‌ಜೆಡಿ 2008, ಬೆಂಗಳೂರು, ದಿ:22ನೇ ಡಿಸೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಜಿ.ಬಿ. ಕಿರಣ್ ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಅರಸೀಕೆರೆ, ಹಾಸನ ಜಿಲ್ಲೆ ಇವರನ್ನು ಅವರ ಮೇಲಿನ ಇಲಾಖಾ ವಿಚಾರಣೆಯನ್ನು ಬಾಕಿಯಿರಿಸಿ ಹಾಗೂ ಜಿಲ್ಲಾ ಪಂಚಾಯತಿ ಹಾಸನ ಇವರು ಈ ಬಗ್ಗೆ ರಚಿಸಿರುವ ಪರಿಶೀಲನಾ ಸಮಿತಿಯ ವರದಿಯ ಶಿಫಾರಸ್ಸುಗಳನ್ನು ಕಾಯ್ದಿರಿಸಿ ಇವರ ಅಮಾನತ್ತನ್ನು ತಕ್ಷಣದಿಂದಲೇ ಜಾರಿಗೆ ಬರುವಂತೆ ತೆರವುಗೊಳಿಸಿ, ಸೇವೆಗೆ ಪುನರ್ ಸ್ಥಾಪಿಸಿ ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಶ್ರೀನಿವಾಸಪುರ, ಕೋಲಾರ ಜಿಲ್ಲೆ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ನರಸಿಂಹಯ್ಯ**

ಪಿ.ಆರ್. 207 ಸರ್ಕಾರದ ಅಧೀನ ಕಾರ್ಯದರ್ಶಿ–2(ಪ್ರಭಾರ),

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

**ಕೃಷಿ ಸಚಿವಾಲಯ**

**ವಿಷಯ :** ಶ್ರೀ ವಿಷ್ಣುದಾಸ್ ಮುರ್ಗಾಕರ್, ಸಹಾಯಕ ಕೃಷಿ ನಿರ್ದೇಶಕರು, ಜಂಟಿ ಕೃಷಿ ನಿರ್ದೇಶಕರ ಕಚೇರಿ, ಬೀದರ್, ಇವರು ಸ್ವ ಇಚ್ಛಾ ನಿವೃತ್ತಿ ಹೊಂದಲು ಅನುಮತಿ.

**ಓದಲಾಗಿದೆ :** 1 ಕೃಷಿ ಆಯುಕ್ತರ ಪತ್ರ ಸಂ:ಕೃಷಿಪ–1/31/2008–09 ದಿನಾಂಕ:23.9.2008 & 18.11.2008.

